# ವಿವಾಹ

## ಒಂದು ಕೈಪಿಡಿ

ಜಯವದನ ತನ್ನ ಪ್ರಿಯಳಾದ ಲಕ್ಷ್ಮಿಗೆ ಜಯವಿತ್ತ ಕ್ಷೀರಾಂಬುಧಿಯಲ್ಲಿ । ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ ದಯದಿ ನಮ್ಮೆಲ್ಲರ ಕಾಪಾಡ



ಡಾ|| ಹೆಚ್. ಸತ್ಯನಾರಾಯಣಾಚಾರ್ಯ

# ವಿವಾಹ

## ಒಂದು ಕೈಪಿಡಿ

**ಡಾ|| ಹೆಚ್. ಸತ್ಯನಾರಾಯಣಾಚಾರ್ಯ**
ಪ್ರಾಧ್ಯಾಪಕರು,
ಪೂರ್ಣಪ್ರಜ್ಞವಿದ್ಯಾಪೀಠ,
ಬೆಂಗಳೂರು.

# ವಿವಾಹ - ಒಂದು ಕೈಪಿಡಿ

ಈ ಪುಸ್ತಕವು ಬೆಂಗಳೂರಿನ ಶ್ರೀವೇದಗರ್ಭ ಜಿ.ಶೇಷಗಿರಿರಾಯರ ದ್ವಿತೀಯಪುತ್ರ ಚಿ॥ವಿಶ್ವೇಶನ ವಿವಾಹಮಹೋತ್ಸವದ ಶುಭಾವಸರದಲ್ಲಿ(೬-೧೧-೨೦೦೯) ಬೆಂಗಳೂರಿನ ಭಂಡಾರಕೇರಿ ಮಠದ ಶ್ರೀಭಾಗವತಾಶ್ರಮದಲ್ಲಿ ಶ್ರೀಶ್ರೀವಿದ್ಯೇಶತೀರ್ಥ ಶ್ರೀಪಾದರ ಅಮೃತಹಸ್ತದಿಂದ ಶ್ರೀಶ್ರೀರಾಮಚಂದ್ರದೇವರ ಸನ್ನಿಧಾನದಲ್ಲಿ ದಿನಾಂಕ ॥ ೦೫-೧೧-೨೦೦೯ ಸಮರ್ಪಿತ

ಲೇಖಕರು : ಡಾ॥ ಹೆಚ್. ಸತ್ಯನಾರಾಯಣಾಚಾರ್ಯ



ಪ್ರತಿಗಳು : ೧೫೦೦
ಪ್ರಥಮಾವೃತ್ತಿ : ೨೦೦೯

ಪುಟಗಳು : ೯೨
(ಈ ಪುಸ್ತಕವು ಮಾರಾಟಕ್ಕಿಲ್ಲ. ಪುಸ್ತಕಕ್ಕಾಗಿ ಪ್ರಕಾಶಕರನ್ನು ಸಂಪರ್ಕಿಸಿ.)

ಪ್ರಕಾಶಕರು :
ವೇದಗರ್ಭ ಜಿ. ಶೇಷಗಿರಿರಾವ್,
76, 2 ಎ ಕ್ರಾಸ್, 3 ಎ ಮೇನ್
ನಾಗೇಂದ್ರಬ್ಲಾಕ್, ಬನಶಂಕರಿ ಮೂರನೆಯ ಹಂತ,
ಬೆಂಗಳೂರು - 50.
ದೂರವಾಣಿ 26729827
Email vedagarbha@gmail.com

ಡಿ.ಟಿ.ಪಿ. - ಕೆ.ಸುಬ್ಬಣ್ಣ 9945152661

ಮುಖಪುಟ : ಶ್ರೀ ಕೆ.ಎಂ. ಶೇಷಗಿರಿ

ಮುದ್ರಕರು : ರಾಷ್ಟ್ರೋತ್ಥಾನ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು

ಈ ಪುಸ್ತಕ ಪರಿಸರಸ್ನೇಹಿಕಾಗದದಿಂದ ಮುದ್ರಿತವಾಗಿದೆ

ಶ್ರೀಮನ್ಮಧ್ವಮಹಾಚಾರ್ಯಪದಪದ್ಮೈಕಸದ್ಮನಾಮ್ ।
ಅಣೂನಾಂ ಮಹತಾಂ ಚಾಪಿ ಭವತಾತ್ ಕರುಣಾ ಮಯಿ ॥

* * * *

ಈ ಕಿರುಹೊತ್ತಿಗೆಯನ್ನು ನಮ್ಮ ಪೂರ್ವಜರಾದ

ಶ್ರೀಮತಿ ಮತ್ತು ಶ್ರೀಸರಪಳಿ ಕೃಷ್ಣಾಚಾರ್ಯರು

ಚಿಕ್ಕೇರಹಳ್ಳಿಯ

ಶ್ರೀಮತಿ ಮತ್ತು ಶ್ರೀ ಗುಂಡುದಾಸರು,

ಅವರ ಅಂತರ್ಗತ

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ

ಶ್ರೀಲಕ್ಷ್ಮೀನಾರಾಯಣರಲ್ಲಿ
ಅರ್ಪಿಸುತ್ತಿದ್ದೇವೆ.

* * * *

**ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು**
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,
ಶ್ರೀಪೇಜಾವರ ಅಧೋಕ್ಷಜಮಠ, ಉಡುಪಿ 576 101.

# ಅನುಗ್ರಹಸಂದೇಶ

ಭಾರತೀಯರ ಜೀವನದಲ್ಲಿ ವಿವಾಹವು ಹೊಸಮಜಲನ್ನು ತಲುಪುವ ಮಹತ್ವದ ಘಟ್ಟ. ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಕೌಟುಂಬಿಕ ಧಾರ್ಮಿಕ ಮತ್ತು ಸಾಮಾಜಿಕ ಹೊಣೆಗಾರಿಕೆಯನ್ನು ಸ್ವೀಕರಿಸುವ ಮಹತ್ವದ ಸನ್ನಿವೇಶ ಇದಾಗಿದೆ. ನಮ್ಮ ಎಲ್ಲಾ ಸಂಸ್ಕಾರಗಳಲ್ಲಿ ಅತ್ಯಂತ ವಿಶಿಷ್ಟವೂ ಮಂಗಲಕರವೂ ಆದ ಈ ವಿವಾಹಸಂಸ್ಕಾರದ ನಿಜಚಿತ್ರಣವನ್ನು ನೀಡಿ, ಜನರಿಗೆ ಅದರ ಮಹತ್ವವನ್ನು ವಿವರಿಸುವ ಈ ಕೃತಿಯನ್ನು ನನ್ನ ಪ್ರಿಯಶಿಷ್ಯರೂ ಶಾಸ್ತ್ರ-ಪೌರೋಹಿತ್ಯ ಇವೆರಡರಲ್ಲೂ ಸವ್ಯಸಾಚಿಗಳೆನಿಸಿದ ಶ್ರೀಸತ್ಯನಾರಾಯಣಾ-ಚಾರ್ಯರು ರಚಿಸಿದ್ದಾರೆ. ಎಲ್ಲಾ ಧಾರ್ಮಿಕಜನತೆಯೂ ಇದರ ಲಾಭವನ್ನು ಪಡೆಯಬೇಕಾಗಿ ಅಪೇಕ್ಷಿಸುತ್ತೇವೆ.

ಈ ಪುಸ್ತಕವನ್ನು ಪ್ರಕಾಶಿಸುತ್ತಿರುವ ವೇದಗರ್ಭಶೇಷಗಿರಿರಾಯರಿಗೂ ನವದಂಪತಿಗಳಾದ ರಮ್ಯಾ-ವಿಶ್ವೇಶರಿಗೂ ನಮ್ಮ ಆರಾಧ್ಯಮೂರ್ತಿ ಶ್ರೀರಾಮವಿಟ್ಠಲದೇವರು ಸನ್ಮಂಗಳವನ್ನು ಕರುಣಿಸಲಿ.

ಇತಿ ನಾರಾಯಣಸ್ಮರಣೆಗಳು,

**ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು.**

# ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದಂಗಳವರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,
ಶ್ರೀಭಂಡಾರಕೇರಿ ಸತ್ಯತೀರ್ಥಸಂಸ್ಥಾನ, ಭಾಗವತಾಶ್ರಮ, ಬೆಂಗಳೂರು.

## ಅನುಗ್ರಹವಚನ

ವೈದಿಕ ಷೋಡಶಸಂಸ್ಕಾರಗಳಲ್ಲಿ ''ವಿವಾಹ''ವು ಸೇರಿದೆ.ಬ್ರಾಹ್ಮಣನು ಉಪನಯನ-ಸಂಸ್ಕಾರದಿಂದ 'ದ್ವಿಜ'ನಾಗಿ ವೇದಾಧ್ಯಯನ - ವೇದೋಕ್ತಕರ್ಮಾನುಷ್ಠಾನಗಳಿಗೆ ಅಧಿಕಾರಿ-ಯಾಗುತ್ತಾನೆ.

ಸ್ತ್ರೀಗೆ ಪತಿಯೊಂದಿಗೆ ವೇದೋಕ್ತಕರ್ಮಗಳ ಅನುಷ್ಠಾನಕ್ಕೆ ವಿವಾಹಸಂಸ್ಕಾರವಾದಾ-ಗಲೇ ಅಧಿಕಾರವು ಲಭ್ಯವಾಗುತ್ತದೆ. ಆದುದರಿಂದ ಸ್ತ್ರೀಣಾಂ ಪ್ರದಾನಕರ್ಮೈವ ಉಪ-ನಯನಂ (ಸ್ತ್ರೀಯರಿಗೆ ವಿವಾಹವು ಉಪನಯನಸಂಸ್ಕಾರದಂತೆ)ಎಂದು ಸ್ಮೃತಿಕಾರರು ಹೇಳಿದ್ದಾರೆ.

ಇಂಥ ಪರಮಪವಿತ್ರವಾದ ವಿವಾಹಸಂಸ್ಕಾರವು ಇಂದು ಧಾರ್ಮಿಕತೆಯಿಂದ ದೂರ ಸರಿದು ಮನೋರಂಜನೆಯ ದೃಶ್ಯಮಾಧ್ಯಮಕ್ಕೆ ಗ್ರಾಸವಾಗುವ ಪಾರ್ಟಿ ಕಾರ್ಯಕ್ರಮದ ರೂಪವನ್ನು ತಾಳುತ್ತಿರುವುದು ವಿಷಾದನೀಯವಾಗಿದೆ. ಈ ಪರಿಸ್ಥಿತಿಯಲ್ಲಿ ವೇದಗರ್ಭ ಶ್ರೀಶೇಷಗಿರಿರಾಯರು ತಮ್ಮ ದ್ವಿತೀಯ ಸುಪುತ್ರನಾದ 'ಶ್ರೀವಿಶ್ವೇಶ'ನ ವಿವಾಹಮಹೋತ್ಸವದ ಸಂದರ್ಭದಲ್ಲಿ ಜನತೆಯಲ್ಲಿ ವಿವಾಹದ ಬಗೆಗೆ ಪವಿತ್ರಭಾವನೆ ಜಾಗೃತಿಗೊಳಿಸುವ ಸಲುವಾಗಿ ವಿವಾಹದ ಬಗೆಗೆ ಒಂದು ಪುಸ್ತಿಕೆಯನ್ನು ಪ್ರಕಟಿಸಿ ಶ್ರೀಲಕ್ಷ್ಮೀನಾರಾಯಣರಿಗೆ ಅದನ್ನು ಅರ್ಪಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವುದು ಸಂತೋಷದಾಯಕವಾಗಿದೆ.

ಪ್ರಸಿದ್ಧವಿದ್ವಾಂಸರೂ, ನಿಷ್ಠಾವಂತ ತಜ್ಞಪುರೋಹಿತರೂ ಆದ ಶ್ರೀಸತ್ಯನಾರಾಯಣಾ ಚಾರ್ಯರು ವಿವಾಹದ ಬಗೆಗಿನ ಈ ಕೈಪಿಡಿಯನ್ನು ರಚಿಸಿದ್ದಾರೆ. ಇವರು ಪೂರ್ವದಲ್ಲಿ ಉಪನಯನದ ಬಗೆಗೆ ಒಂದು ಕೈಪಿಡಿಯನ್ನು ರಚಿಸಿದ್ದಾರೆ. ವಿವಾಹದ ಬಗ್ಗೆ ಸಾಕಷ್ಟು ಮಾಹಿತಿಗಳನ್ನೊಳಗೊಂಡ ಈ ಕಿರುಕೃತಿಯನ್ನು ರಚಿಸಿದ ಶ್ರೀಸತ್ಯನಾರಾಯಣಾಚಾರ್ಯರನ್ನು ನಾವು ವಿಶೇಷವಾಗಿ ಅಭಿನಂದಿಸಿ ಅವರಿಗೆ ಶ್ರೇಯಸ್ಸನ್ನು ಶ್ರೀರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

ಇದಲ್ಲದೆ ಈ ಕಿರುಕೃತಿಯ ಪ್ರಕಾಶನದ ಬಗೆಗೆ ತಂದೆಗಿಂತಲೂ ಮಿಗಿಲಾಗಿ ಅವರ ಸುಪುತ್ರರಾದ ಶ್ರೀಶ್ರೀನಿವಾಸವೇದಗರ್ಭರು ಕಾಳಜಿ ಶ್ರಮವನ್ನು ವಹಿಸಿದ್ದಾರೆ. ವೇದಗರ್ಭ ಶ್ರೀಶೇಷಗಿರಿರಾಯರ ಜೊತೆಗೆ ಅವರನ್ನು ವಿಶೇಷವಾಗಿ ಅಭಿನಂದಿಸಿ ಶ್ರೇಯಸ್ಸನ್ನು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ. ವಿವಾಹವಾಗಲಿರುವ ವಿಶ್ವೇಶ-ರಮ್ಯಾ ದಂಪತಿಗಳಿಗೆ ಲಕ್ಷ್ಮೀನಾರಾಯಣರು ವಿಶೇಷ ಅನುಗ್ರಹಿಸಿ ಆದರ್ಶದಂಪತಿಗಳಾಗಿ ಬಾಳುವಂತೆ ಕೃಪೆ ತೋರಲಿ ಎಂದು ಹಾರೈಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

**ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದಂಗಳವರು**

# ಆಶೀರ್ವಾದ

**ಡಾ|| ಹೆಚ್. ಸತ್ಯನಾರಾಯಣಾಚಾರ್ಯರ** ''ವಿವಾಹ -ಒಂದು ಕೈಪಿಡಿ'' ಗಾತ್ರದಲ್ಲಿ ಚಿಕ್ಕದಾದರೂ ವಿಷಯದ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದ ಕೃತಿ. ವೈದಿಕ ವಿವಾಹಪದ್ಧತಿಯ ಮೌಲಿಕಾಂಶಗಳ ಪರಿಚಯವಿಲ್ಲದೆ ಅದರ ಬಗ್ಗೆ ಅಸಡ್ಡೆಯ ಮಾತನಾಡುವವರಿಗೆ ಆ ಪದ್ಧತಿಯಲ್ಲಿರುವ ಅಪೂರ್ವಾಂಶಗಳ ಬಗ್ಗೆ ಸೂಕ್ತ ವಿವರಣೆ-ಯನ್ನು ನೀಡಿ ಆ ಪದ್ಧತಿಯ ಬಗ್ಗೆ ಗೌರವಾದರಗಳು ಹೆಚ್ಚುವಂತೆ ಮಾಡುವ ಸರ್ವ-ಸಂಗ್ರಾಹ್ಯಕೃತಿ ಎಂದರೆ ಅತಿಶಯವೇನಿಲ್ಲ.

ಗೃಹಸ್ಥಾಶ್ರಮದ ಮಹತ್ವ, ಸತಿಪತಿಗಳಿಬ್ಬರಿಗೂ ಇರಬೇಕಾದ ಮನೋಧರ್ಮ, ವಿವಾಹದ ನಾನಾಭೇದಗಳು, ವಧೂವರರಲ್ಲಿ ಇರಬೇಕಾದ ಗುಣಗಳು, ಕನ್ಯಾದಾನ ಸ್ವೀಕರಿಸಬೇಕಾದವನಿಗಿರಬೇಕಾದ ಅರ್ಹತೆ, ಜಾತಕಘಟನೆ, ಮನೋಘಟನೆಗಳ ಬಗ್ಗೆ ಸೂಕ್ತವಿವರಣೆ, ವಿವಾಹಮುಹೂರ್ತ, ವಿವಾಹಪ್ರಕ್ರಿಯೆಯಲ್ಲಿ ಸೇರಿರುವ ನಿಶ್ಚಿತಾರ್ಥ ನಾಂದಿ ದೇವರ ಸಮಾರಾಧನೆ ಲಗ್ನಪತ್ರಿಕೆಯ ಒಕ್ಕಣೆ ಮೊದಲಾದ ಎಲ್ಲ ಅಂಶಗಳನ್ನೂ ಅವುಗಳಿಗೆ ಸೇರಿರುವ ಇತರ ನಾನಾವಸ್ತುಗಳ ಪರಿಚಯ, ಪುಣ್ಯಾಹ ಮೊದಲಾದ ಇತರ ಎಲ್ಲಅಂಗಗಳ ಬಗ್ಗೆ ಸೂಕ್ತ ಬೆಳಕನ್ನು ಚೆಲ್ಲುವ ಈ ಪುಸ್ತಿಕೆಯು ಯುವಕ ಯುವತಿಯರಿಗೆ ಮಾತ್ರವಲ್ಲದೇ ಎಲ್ಲರಿಗೂ ಅತ್ಯಾವಶ್ಯಕವಾದ ವಿಷಯಗಳ-ನ್ನೊಳಗೊಂಡು ಎಲ್ಲರೂ ಓದಲೇಬೇಕಾದ ಕೃತಿಯಾಗಿದೆ. ಶಾಸ್ತ್ರಗಳಲ್ಲಿನ ವೈದುಷ್ಯದ ಜೊತೆಗೆ ವೈದಿಕಸಂಸ್ಕಾರಗಳ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಯೋಗ್ಯತೆ ಇರುವ ಸತ್ಯನಾರಾಯಣಾಚಾರ್ಯರು ಈ ಪುಸ್ತಿಕೆಯನ್ನು ರಚಿಸಿ ಎಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅವರಿಗೆ ನನ್ನ ಹಾರ್ದಿಕ ಅಭಿನಂದನೆಗಳು.

ತಮ್ಮ ದ್ವಿತೀಯ ಸುಪುತ್ರ **ಚಿ||ವಿಶ್ವೇಶ** ಇವರ ವಿವಾಹದ ಶುಭಸಂದರ್ಭದಲ್ಲಿ ಈ ಪುಸ್ತಿಕೆಯನ್ನು ಮುದ್ರಿಸಿ ಪ್ರಕಾಶಗೊಳಿಸಿದ **ವೇದಗರ್ಭ ಶ್ರೀಶೇಷಗಿರಿರಾಯರಿಗೂ** ಎಲ್ಲ ಓದುಗರೂ ಕೃತಜ್ಞರಾಗಿರಬೇಕು.

ನೂತನ ದಂಪತಿಗಳಿಗೆ ಶ್ರೀಹರಿವಾಯುಗುರುಗಳು ಸಮಸ್ತಸನ್ಮಂಗಳವನ್ನು ಕರುಣಿಸಲೆಂದು ಮನಃಪೂರ್ವಕ ಹಾರೈಕೆಗಳು.

**ಡಿ. ಪ್ರಹ್ಲಾದಾಚಾರ್ಯ,**

ನಿವೃತ್ತ ಉಪಕುಲಪತಿಗಳು,
ರಾಷ್ಟ್ರೀಯಸಂಸ್ಕೃತವಿದ್ಯಾಪೀಠ, ತಿರುಪತಿ.

# ಆಶೀರ್ವಾದ

ಸಂತತಿಯ ಶುದ್ಧಿಗಾಗಿ ಧಾರ್ಮಿಕಸಂಸ್ಕಾರಗಳು ಹದಿನಾರು. ಸಂಸ್ಕಾರಗಳಲ್ಲಿ ಗರ್ಭಾಧಾನ ಮೊದಲನೆಯದು, ವಿವಾಹ ಕೊನೆಯದು. ಹೆಣ್ಣಿಗೆ ವಿವಾಹವೇ ಎಲ್ಲಾ ಸಂಸ್ಕಾರಗಳ ಪ್ರತಿನಿಧಿ. ಗಂಡಿಗೆ ದೇವಋಣ, ಪಿತೃಋಣ ಪರಿಹಾರಕ್ಕಾಗಿ ಇರುವ ಮಾಧ್ಯಮ. ಗೃಹಸ್ಥಾಶ್ರಮಿಯಾಗಿ ಹೋಮ-ಹವನಗಳಲ್ಲಿ ಅಧಿಕಾರ ಪಡೆದು ದೇವ ಋಣದ ಪರಿಹಾರ. ಸಂತತಿಯನ್ನು ಅನುಸ್ಯೂತಗೊಳಿಸುವ ಮೂಲಕ ಪಿತೃಋಣ ಪರಿಹಾರ. ಹೀಗೆ ಷೋಡಶಸಂಸ್ಕಾರಗಳಲ್ಲಿ ವಿವಾಹವು ಹಿರಿದಾದ ಸ್ಥಾನವನ್ನು ಗಳಿಸಿದೆ.

ತಪಸ್ಸಿನಿಂದಲೇ ಮಾನಸಿಕ ಸೃಷ್ಟಿಯಲ್ಲಿ ತೊಡಗಿದ ಬ್ರಹ್ಮದೇವರ ಶರೀರ ಇಬ್ಭಾಗವಾಯಿತು. ಎಡಭಾಗ ಹೆಣ್ಣು, ಬಲಭಾಗ ಗಂಡು. ಹೆಣ್ಣು ಶತರೂಪಾದೇವಿ. ಗಂಡು ಸ್ವಾಯಂಭುವ ಮನು. ಇಲ್ಲಿಂದ ಮುಂದೆ ಗಂಡು-ಹೆಣ್ಣಿನ ಸಂಪರ್ಕದಿಂದ ಸೃಷ್ಟಿ ಆರಂಭವಾಯಿತು. ಈ ದಂಪತಿಗಳ ಹಿರಿಯಮಗಳು ದೇವಹೂತಿ. ಬ್ರಹ್ಮದೇವರ ಛಾಯೆಯಿಂದ ಜನಿಸಿದ ಕರ್ದಮಪ್ರಜಾಪತಿಗೆ ಇವಳನ್ನು ಧಾರೆ ಎರೆದುಕೊಡಲಾಯಿತು. ಇದು ವಿಶ್ವದ ಮೊದಲ ಮದುವೆ - 'ಆದ್ಯೋ ವೈವಾಹಿಕೋ ವಿಧಿಃ'. ಸರಳವಾದ ವಿವಾಹ ಇದು. ಒಬ್ಬ ತಪಸ್ವಿಯೊಂದಿಗೆ ರಾಜಕುಮಾರಿಗೆ ನಡೆದ ಮದುವೆ. ಧಾರ್ಮಿಕ ವಿಧಿಯ ಹೊರತಾಗಿ ಯಾವ ಆಡಂಬರವೂ ಅಲ್ಲಿರಲಿಲ್ಲ.

'ಪ್ರಜಾಯೈ ಗೃಹಮೇಧಿನಾಂ' ಗೃಹಸ್ಥಾಶ್ರಮ ಸತ್ಪ್ರಜೆಗಳ ನಿರ್ಮಾಣಕ್ಕಾಗಿ. ಅಲ್ಲಿ ಇಂದ್ರಿಯ ತೃಪ್ತಿ ಗೌಣ. ಅಗ್ನಿ-ಬ್ರಾಹ್ಮಣರ ಸನ್ನಿಧಿಯಲ್ಲಿ ಪಾಣಿಗ್ರಹಣ ಮಾಡಿದ ಹೆಣ್ಣನ್ನು ಎತ್ತರಕ್ಕೆ ಒಯ್ದು ತಾನೂ ಆಧ್ಯಾತ್ಮಿಕ ಔನ್ನತ್ಯವನ್ನು ಸಾಧಿಸುವ ಕಾರಣದಿಂದಾಗಿಯೇ ಈ ಸಂಸ್ಕಾರಕ್ಕೆ 'ಉದ್ವಾಹ' ಎಂದು ಹೆಸರು. ಈ ಸಂಸ್ಕಾರದ ಅಂಗ-ಉಪಾಂಗಗಳ ಸರಿಯಾದ ತಿಳಿವಳಿಕೆ ಮೂಡಿದರೆ ಇದರ ಯಾಂತ್ರಿಕತೆ ದೂರವಾಗುತ್ತದೆ. ಆಡಂಬರ, ಡಂಭಾಚಾರಗಳಿಗೆ ಅವಕಾಶವಿರುವುದಿಲ್ಲ. ಅದಕ್ಕಾಗಿ ಈ ಕಿರುಹೊತ್ತಿಗೆ ತುಂಬಾ ಉಪಯುಕ್ತವಾಗಿದೆ.

ವಿದ್ವಾಂಸರಾದ ಸತ್ಯನಾರಾಯಣಾಚಾರ್ಯರು ಉಭಯಕುಶಲರು. ಈ ಕಡೆ ವೇದಾಂತದ ಉನ್ನತಪಾಂಡಿತ್ಯವೂ ಅವರಿಗಿದೆ. ಆ ಕಡೆ ಯಾಜ್ಞಿಕವೃತ್ತಿಯ ಪರಿಣತಿಯೂ ಇದೆ. ಹೀಗಾಗಿ ಈ ಪುಸ್ತಕವು ವಿದ್ವತ್ತೆ ಮತ್ತು ಅನುಭವದ ಹಿನ್ನೆಲೆಯಲ್ಲಿ ಮೂಡಿ ಬಂದಿದೆ.

ಶ್ರೀಯುತ ವೇದಗರ್ಭಶೇಷಗಿರಿರಾಯರು ತುಂಬಾ ಶ್ರದ್ಧಾವಂತರು, ಶಾಸ್ತ್ರಜ್ಞರು. ಜವಾಬ್ದಾರಿಯಿಂದಲೇ ತಮ್ಮ ಇಬ್ಬರು ಮಕ್ಕಳನ್ನು ಬೆಳೆಸಿದ್ದಾರೆ. ಇಬ್ಬರಿಗೂ ಮೇಧಾ-

ಶಕ್ತಿಯ ಜೊತೆಗೆ ಶಾಸ್ತ್ರನಿಷ್ಠೆಯನ್ನೂ ಭಗವಂತ ದಯಪಾಲಿಸಿದ್ದಾನೆ. ಹಿರಿಯ ಮಕ್ಕಳಾದ ಶ್ರೀನಿವಾಸ ಲೌಕಿಕ ಉದ್ಯೋಗದಲ್ಲಿದ್ದು ಉದ್ಗ್ರಂಥಗಳ ಅಧ್ಯಯನವನ್ನು ನಡೆಸುತ್ತಿದ್ದಾರೆ. ಜ್ಞಾನಪಿಪಾಸೆ, ಆಚಾರನಿಷ್ಠೆ, ಸರಳತೆ, ಸಜ್ಜನಿಕೆಗಳನ್ನು ಮೈಗೂಡಿಸಿ ಕೊಂಡಿದ್ದಾರೆ. ಎರಡನೆಯ ಮಗ ವಿಶ್ವೇಶನ ಮದುವೆಯ ಸಂದರ್ಭದಲ್ಲಿ ಈ ಹೊತ್ತಿಗೆ ಪ್ರಕಟವಾಗುತ್ತಿದೆ. ಅವನೂ ಲೌಕಿಕವ್ಯಾಸಂಗದ ತುತ್ತತುದಿಯಲ್ಲಿದ್ದು ವೇದಾಂತವನ್ನು ಶ್ರದ್ಧೆಯಿಂದ ಬೆಳೆಸಿಕೊಂಡಿದ್ದಾನೆ. ಅಮೇರಿಕದಂತಹ ವಿಲಾಸೀ ದೇಶದಲ್ಲಿದ್ದರೂ ದೂರವಾಣಿಯ ಮೂಲಕ ವೇದಾಂತಪಾಠವನ್ನು ಕೇಳುತ್ತಿದ್ದಾನೆ.

**ಚಿ॥** ವಿಶ್ವೇಶ ಗೃಹಸ್ಥಾಶ್ರಮಕ್ಕೆ ಕಾಲಿಡುತ್ತಿದ್ದಾನೆ. ಭಗವಂತ ಸಾರ್ಥಕವಾದ ದಾಂಪತ್ಯವನ್ನು ಅನುಗ್ರಹಿಸಿ ವೇದಗರ್ಭವಂಶದ ಅನ್ವರ್ಥತೆಯನ್ನು ಸಂಪಾದಿಸಿ ಕೊಡಲಿ ಎಂದು ನಾವೆಲ್ಲ ಹಾರೈಸೋಣ.

**ಎ. ಹರಿದಾಸ ಭಟ್,**
ಪ್ರಾಂಶುಪಾಲರು,
ಪೂರ್ಣಪ್ರಜ್ಞವಿದ್ಯಾಪೀಠ
ಬೆಂಗಳೂರು.

# ಕೃತಜ್ಞತಾ ಸಮರ್ಪಣೆ (೧)

ನಮ್ಮ ದ್ವಿತೀಯಪುತ್ರ ಚಿ॥ವಿಶ್ವೇಶನ ವಿವಾಹದ ಶುಭಸಂದರ್ಭದಲ್ಲಿ ಈ ಕಾರ್ಯಕ್ರಮಕ್ಕೆ ಖುದ್ದಾಗಿ ಬಂದು ಆಶೀರ್ವದಿಸಿದ ಎಲ್ಲರಿಗೂ ನಮ್ಮ ಕುಟುಂಬದ ವತಿಯಿಂದ ಅನೇಕ ಧನ್ಯವಾದಗಳು. ಕೆಲವರು ಬಂದಿಲ್ಲ. ಆದರೂ ಮನಸಾರೆ ಹರಸಿ-ದ್ದಾರೆ. ಎಷ್ಟೋ ಜನರನ್ನು ಕರೆಯಲು ಸಾಧ್ಯವಾಗಲಿಲ್ಲ. ಅವರೆಲ್ಲರ ಕ್ಷಮೆ ಕೋರುತ್ತೇನೆ.

ಈ ಸಂದರ್ಭದಲ್ಲಿ ಒಂದು ಪುಟ್ಟ ಜ್ಞಾನಕಾರ್ಯವು ನಡೆಯಲೇಬೇಕೆಂಬ ನನ್ನ ಹಾಗೂ ನನ್ನ ಮಗ ಚಿ॥ಶ್ರೀನಿವಾಸನ ವಿಶೇಷ ಹಂಬಲದ ಫಲ ಈ ಹೊತ್ತಿಗೆ - **ವಿವಾಹ – ಒಂದು ಕೈಪಿಡಿ.** ಅಲ್ಲದೇ ಚಿ॥ ಶ್ರೀನಿವಾಸನ ಅಪೇಕ್ಷೆಯಂತೆ ನಾಲ್ಕು ಮಾತುಗಳು ನಮ್ಮ ವಂಶದ ಹಿರಿಯರ ಸ್ಮರಣೆಯೊಂದಿಗೆ.

ನಮ್ಮದು ಗುತ್ತಲದೇಸಾಯಿಯವರ ವಂಶ. (ಶ್ರೀರಾಘವೇಂದ್ರದೇಸಾಯಿ ನನ್ನ ಪ್ರಪಿತಾಮಹ - ಮುತ್ತಜ್ಜ). ಅವರ ಮಗ ಸುಬ್ಬರಾವ್ ಅವರ ಹೆಂಡತಿ ಸೀತಮ್ಮ; ಇವರ ಮಗ ನಮ್ಮ ತಂದೆ ಗುಂಡೂರಾಯರು ನನ್ನ ತಾಯಿ ಲೀಲಾಬಾಯಿ. ನಮ್ಮ ತಾಯಿಕಡೆ ಪ್ರಸಿದ್ಧ ವೇದಗರ್ಭ ಮನೆತನ. ನಂತರ ಸರಪಳಿ ಎಂಬ ಹೆಸರು ಬಂತಂತೆ. ನಮ್ಮ ಮುತ್ತಾತ ಸರಪಳಿ ಕೃಷ್ಣಾಚಾರ್ಯರು ''ನ್ಯಾಯವೇದಾಂತಸೂರ್ಯ'' ಬಿರುದಾಂಕಿತರು. ಅವರ ಮಗ ಸರಪಳಿ ಶ್ರೀನಿವಾಸಾಚಾರ್ಯರು; ಅವರ ಮಗಳೇ ನನ್ನ ತಾಯಿ ಲೀಲಾಬಾಯಿ.

ನನ್ನ ಧರ್ಮಪತ್ನಿ ಚಿ॥ಹ॥ಕುಂ॥ಸೌ॥ ಸುಧಾ(ಸೀತಾ) ಚಿಕ್ಕೇರಹಳ್ಳಿಯಲ್ಲಿದ್ದ ಪ್ರಸಿದ್ಧ ಮೋಹನದಾಸರ ಮನೆತನದ ಗುಂಡದಾಸರ ಮೊಮ್ಮಗಳು. ಗುಂಡದಾಸರು ನಮ್ಮ ಮುತ್ತಜ್ಜ ಸರಪಳಿಕೃಷ್ಣಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದ ಶಿಷ್ಯರು. ನಮ್ಮ ಅತ್ತೆ ಮಾವನವರು ಭಾಗೀರಥೀಬಾಯಿ-ರಾಮರಾಯರು ಎಂದರೆ ಗುಂಡದಾಸರ ಮಗಳ ಮಗಳು ನನ್ನ ಪತ್ನಿ. ನಮ್ಮ ಮಾವನವರು ವೃತ್ತಿಯಲ್ಲಿ ಶಾನುಭೋಗರು. ಪ್ರವೃತ್ತಿಯಲ್ಲಿ ಸಾತ್ವಿಕಮನೋಭಾವದ ತುಂಬಾ ಆಸ್ತೀಕರು.

ಈ ವಂಶವಾಹಿನಿಯ ಕಾರಣದಿಂದಲೇ ಇರಬೇಕು, ನಮಗೂ ಕಿಂಚಿತ್ ಧಾರ್ಮಿಕ ಪ್ರವೃತ್ತಿ ಬಂದಿದೆ. ಈ ಪ್ರವೃತ್ತಿಯ ಅಂಕುರಕ್ಕೆ ನೀರು ಎರೆದವರು ಅನೇಕ ಸಾತ್ವಿಕ ವಿದ್ವಾಂಸರು, ಹಾಗೂ ಅನೇಕ ಮಠಾಧೀಶರು. ಇಷ್ಟೆಲ್ಲಾ ಹೇಳುವ ಉದ್ದೇಶ ನಮ್ಮ ಹೆಚ್ಚುಗಾರಿಕೆಯಲ್ಲ. ನಮ್ಮ ಮುಂದಿನ ಪೀಳಿಗೆಗೆ ಧಾರ್ಮಿಕಪ್ರವೃತ್ತಿಯ ಪ್ರವಾಹ ಮುಂದುವರೆಯಲೆಂದು. ಇದೇ 'ಛಾಂದೋಗ್ಯ' 'ಬೃಹದಾರಣ್ಯಕ'ಮೊದಲಾದವುಗಳಲ್ಲಿ ಬಂದ 'ವಂಶಬ್ರಾಹ್ಮಣ'ಗಳಲ್ಲಿ ಅಡಗಿರುವ ತತ್ವ.

ಭಗವಂತನ ಅನಂತನಾಮಗಳಲ್ಲಿ 'ವಂಶವರ್ಧನ'ವೂ ಒಂದು. (ಪ್ರಾಗ್ವಂಶೋ ವಂಶವರ್ಧನಃ - ವಿ.ಸಹಸ್ರನಾಮ) ಅವನು ಶಾಶ್ವತಧರ್ಮಗೋಪ್ತಾ. ಆದ್ದರಿಂದ ಆ ನಾಮಮಹಿಮೆಗಳ ಅನುಸಂಧಾನ ಮಾಡುತ್ತಾ ಅಂತಹ ಲಕ್ಷ್ಮೀನಾರಾಯಣನು ನಮ್ಮ ವಂಶವೃದ್ಧಿ ಗೋತ್ರಾಭಿವೃದ್ಧಿಯನ್ನು ಮಾಡಲಿ. ನಮಗೆ ಹಾಗೂ ನಮ್ಮ ಮಕ್ಕಳಿಗೆ ಎಂತಹ ಪ್ರಸಂಗದಲ್ಲೂ ಧರ್ಮದ ಬದುಕನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ವಿವಾಹಕ್ಕೆ ಅನುಗ್ರಹಮಂತ್ರಾಕ್ಷತೆ ದಯಪಾಲಿಸಿದ ಪರಮಪೂಜ್ಯರಾದ

ಶ್ರೀಶ್ರೀಸತ್ಯಾತ್ಮತೀರ್ಥರು
ಉತ್ತರಾದಿ ಮಠ.

ಶ್ರೀಶ್ರೀವಿಶ್ವೇಶತೀರ್ಥರು
ಪೇಜಾವರ ಮಠ.

ಶ್ರೀಶ್ರೀವಿಶ್ವವಲ್ಲಭತೀರ್ಥರು
ಸೋದೆ ಮಠ.

ಶ್ರೀಶ್ರೀವಿದ್ಯೇಶತೀರ್ಥರು
ಭಂಡಾರಕೇರಿ ಮಠ.

ಶ್ರೀಶ್ರೀಸುಯತೀಂದ್ರತೀರ್ಥರು
ಶ್ರೀರಾಘವೇಂದ್ರಸ್ವಾಮಿಮಠ.

ಶ್ರೀಶ್ರೀವಿಜ್ಞಾನನಿಧಿತೀರ್ಥರು
ಶ್ರೀಪಾದರಾಜಮಠ.

ಶ್ರೀಪಾದಂಗಳವರ ಪಾದಕಮಲಗಳಲ್ಲಿ ನನ್ನ ಅನಂತಾನಂತ ಸಾಷ್ಟಾಂಗ-ನಮಸ್ಕಾರಗಳು.

ಈ ಕಿರುಹೊತ್ತಿಗೆಗೆ ಊಹಿಸಲೂ ಸಾಧ್ಯವಾಗದ ಅತ್ಯಂತ ಕಡಿಮೆ ಅವಧಿಯೊಳಗೆ ಅನುಗ್ರಹಸಂದೇಶವಿತ್ತು ಆಶೀರ್ವದಿಸಿದ, ಚಿಕ್ಕಂದಿನಿಂದ ನನ್ನ ಲೌಕಿಕ, ಆಧ್ಯಾತ್ಮಿಕ ಶ್ರೇಯಸ್ಸಿಗೆ ಕಾರಣರಾಗಿರುವ ಪರಮಪೂಜ್ಯ ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು, ಪೇಜಾವರ ಮಠ ಹಾಗೂ ಶಾಸ್ತ್ರದ ನವನವೀನಚಿಂತನೆಗಳನ್ನು ಕಂಡಾಗಲೆಲ್ಲಾ ಅನು-ಗ್ರಹಿಸುತ್ತಿರುವ, ನಮ್ಮ ಕುಟುಂಬದ ಬಗ್ಗೆ ವಿಶೇಷ ಅನುಗ್ರಹ ಮಾಡುತ್ತಿರುವ ಪರಮ-ಪೂಜ್ಯ ಶ್ರೀಶ್ರೀವಿದ್ಯೇಶತೀರ್ಥಶ್ರೀಪಾದಂಗಳವರು, ಭಂಡಾರಕೇರಿ ಮಠ ಇವರಿಗೆ ಸಾಷ್ಟಾಂಗಪ್ರಣಾಮಗಳು.

ಈ ಹೊತ್ತಿಗೆಗೆ ಆಶೀರ್ವಚನವಿತ್ತಿರುವ ನಮ್ಮ ದೇಶದಲ್ಲಿ ಎಲ್ಲೆಡೆ ಶಾಸ್ತ್ರವೇತ್ತೃಗಳಲ್ಲಿ ಮಾನ್ಯವಿದ್ವಾಂಸರಾದ ಪೂಜ್ಯ ಗುರುಗಳಾದ ವಿದ್ವಾನ್ ಡಿ. ಪ್ರಹ್ಲಾದಾಚಾರ್ಯರು ನಿವೃತ್ತ ಉಪಕುಲಪತಿಗಳು, ರಾಷ್ಟ್ರಿಯ ಸಂಸ್ಕೃತವಿದ್ಯಾಪೀಠ, ತಿರುಪತಿ ಇವರಿಗೆ ನನ್ನ ಕೃತಜ್ಞತಾಪೂರ್ವಕ ಅನೇಕ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ವಿದೇಶದಲ್ಲಿರುವ ನಮ್ಮ ಮಗ ಚಿ॥ವಿಶ್ವೇಶನಿಗೆ ದೂರವಾಣಿಯ ಮೂಲಕ ಪಾಠ ಹೇಳಿ ಅನುಗ್ರಹಿಸಿರುವ, ಆಧ್ಯಾತ್ಮ ಏಳಿಗೆಗೆ ಮಾರ್ಗದರ್ಶನ ನೀಡುತ್ತಿರುವ ಹಾಗೂ

ವಾತ್ಸಲ್ಯದಿಂದ ಕಾಣುತ್ತಿರುವ ಹಾಗೂ ಈ ಹೊತ್ತಿಗೆಗೆ ಆಶೀರ್ವಚನವಿತ್ತಿರುವ ಪೂಜ್ಯ ವಿದ್ವಾನ್ ಎ.ಹರಿದಾಸಭಟ್ಟರು, ಪ್ರಾಂಶುಪಾಲರು ಪೂರ್ಣಪ್ರಜ್ಞವಿದ್ಯಾಪೀಠ ಇವರಿಗೆ ನಮ್ಮ ಕೃತಜ್ಞತಾಪೂರ್ವಕ ಅನೇಕ ಸಾಷ್ಟಾಂಗ ಪ್ರಣಾಮಗಳು.

ಈ ಕೃತಿಯ ಪ್ರಕಾಶನಕ್ಕೆ ಪ್ರೇರಣೆ ಪೂಜ್ಯ ಡಾ॥ ಹೆಚ್. ಸತ್ಯನಾರಾಯಣಾಚಾರ್ಯರ 'ಉಪನಯನ' ಎಂಬ ಕೃತಿ. ಅದೇ ಮಾದರಿಯಲ್ಲಿ ವಿವಾಹದ ಬಗ್ಗೆ ಒಂದು ಕಿರುಕೃತಿ-ಯಾಗಲೆಂಬ ನಮ್ಮ ಪ್ರಾರ್ಥನೆಗೆ ಓಗೊಟ್ಟು ಈ ಕೃತಿಯ ರಚನೆ ಮಾಡಿಕೊಟ್ಟವರು ಪೂಜ್ಯ ಸತ್ಯನಾರಾಯಣಾಚಾರ್ಯರು. ಅತ್ಯಲ್ಪ ಅವಧಿಯ ಮೂರೇ ದಿನಗಳಲ್ಲಿ ಈ ಕೃತಿಯ ರಚನೆ ಮಾಡಿಕೊಟ್ಟಿದ್ದಾರೆ. ಇದಕ್ಕಾಗಿ ಛಲಬಿಡದ ತ್ರಿವಿಕ್ರಮನಂತೆ ಶ್ರಮ-ವಹಿಸಿದ್ದು ಚಿ॥ ಶ್ರೀನಿವಾಸ, ನಮ್ಮ ಮಗ. ಈಗಾಗಲೇ ನಮ್ಮ ಮನೆಯಲ್ಲಿ ಭಾಗವತಪಾಠ, ನಮ್ಮ ಮಕ್ಕಳಾದ ಚಿ॥ಶ್ರೀನಿವಾಸ, ಚಿ॥ವಿಶ್ವೇಶನಿಗೆ ವೈಯುಕ್ತಿಕಪಾಠಗಳನ್ನು ತಮ್ಮ ಅವಿರತ ಕಾರ್ಯಕ್ರಮಗಳ ಮಧ್ಯೆ ಬಿಡುವುಮಾಡಿಕೊಂಡು ಹೇಳುತ್ತಿರುವ, ಇದರ ರಚಯಿತೃ ಶ್ರೀಸತ್ಯನಾರಾಯಣಾಚಾರ್ಯರ ಉಪಕಾರ ಶಬ್ದಾವೇದ್ಯ. ಅಲ್ಲದೆ ಈ ವಿವಾಹಕ್ಕೆ ಸಂಬಂಧಿಸಿದಂತೆ ಎಲ್ಲ ಹಂತಗಳಲ್ಲಿ ತಮ್ಮ ಅಮೂಲ್ಯ ಸಮಯ ನೀಡಿದ್ದು ಅವಿಸ್ಮರಣೀಯ. ಅವರಿಗೆ 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದುಮಾತ್ರ ಹೇಳಬಲ್ಲೆ.

ವಿವಾಹದ ನಿಮಿತ್ತ ನಮ್ಮ ಕೋರಿಕೆಯ ಮೇರೆಗೆ ಸರ್ವಮೂಲಪಾರಾಯಣ, ಮಧ್ವವಿಜಯ, ರುಕ್ಮಿಣೀಶವಿಜಯ, ಹರಿಕಥಾಮೃತಸಾರ ಪಾರಾಯಣ ಮಾಡಿದ ವಿದ್ವಾಂಸರಿಗೆ ಹಾಗೂ ಸನ್ಮಿತ್ರರಿಗೆ ನಮ್ಮ ಅನೇಕ ಸಾಷ್ಟಾಂಗ ನಮಸ್ಕಾರಗಳು.

ಅಂತೂ ವಿವಾಹವೆಂಬ ವೈದಿಕ ಕರ್ಮಸಂದರ್ಭದಲ್ಲಿ ಸಚ್ಛಾಸ್ತ್ರಪಾರಾಯಣ ಹಾಗೂ ಗ್ರಂಥಪ್ರಕಾಶನವೆಂಬ ಕಿರುಜ್ಞಾನಕಾರ್ಯವನ್ನು ಶ್ರೀಗುರುಗಳ ಅಂತ-ರ್ಯಾಮಿಯಾದ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣರಿಗೆ ಅರ್ಪಿಸಿ, ಅವರು ನಮ್ಮ ನವ ವಧೂವರರಾದ ಚಿ॥ಕು॥ಸೌ॥ ರಮ್ಯಾ ಹಾಗೂ ಚಿ॥ವಿಶ್ವೇಶರಿಗೆ ಜ್ಞಾನಭಕ್ತಿವೈರಾಗ್ಯಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ಗ್ರಂಥಪ್ರಕಾಶನಕ್ಕೆ ಅಕ್ಷರಜೋಡಣೆಯನ್ನು ಅತ್ಯಲ್ಪ ಅವಧಿಯಲ್ಲಿ ಮಾಡಿಕೊಟ್ಟಿರುವ ಶ್ರೀಸುಬ್ಬಣ್ಣ ಇವರಿಗೆ, ಸುಂದರ ಮುಖಪುಟನಿರ್ಮಾತೃಗಳಾದ ಹರಿಭಕ್ತಕಲಾವಿದರಾದ ಶ್ರೀ ಕೆ.ಎಮ್.ಶೇಷಗಿರಿಯವರಿಗೆ ಹಾಗೂ ತುರ್ತಾಗಿ ಮುದ್ರಣ

ಮಾಡಲು ಸಹಕರಿಸಿರುವ ಶ್ರೀರಾಷ್ಟ್ರೋತ್ಥಾನ ಮುದ್ರಣಾಲಯದ ಸಿಬ್ಬಂದಿವರ್ಗದವರಿಗೆ ನಮ್ಮ ಅನೇಕ ಕೃತಜ್ಞತೆಗಳು.

ವಿರಮಿಸುವುದಕ್ಕಿಂತ ಮುಂಚೆ ಸರ್ವಕರ್ಮಗಳಲ್ಲೂ ಮಾರ್ಗದರ್ಶನವನ್ನು ನೀಡುತ್ತಿರುವ ಶ್ರೀಮದಾಚಾರ್ಯರ ತೈತ್ತಿರೀಯಭಾಷ್ಯದ **ಸರ್ವಕರ್ಮಕೃತಿಕಾಲೇಷ್ವಪಿ ಸ್ವಾಧ್ಯಾಯಪ್ರವಚನಯೋಃ ಕರ್ತವ್ಯತ್ವಾತ್ ತಯೋಃ ಸರ್ವತ್ರಾನುಷಂಗಃ** ಎಂಬ ಈ ಮಾತನ್ನು ನೆನೆಪಿಸಿಕೊಳ್ಳುತ್ತೇನೆ.

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।**
**ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಮ್ ॥**

**ವೇದಗರ್ಭ ಜಿ.ಶೇಷಗಿರಿರಾವ್,**
**ಬೆಂಗಳೂರು.**

---

## ಕೃತಜ್ಞತೆಗಳು (೨)

ನಮ್ಮ ದ್ವಿತೀಯ ಪುತ್ರ ಚಿ॥ವಿಶ್ವೇಶನ ವಿವಾಹದ ಶುಭಸಂದರ್ಭದಲ್ಲಿ ಪೂಜ್ಯರಾದ ಡಾ॥ಸತ್ಯನಾರಾಯಣಾಚಾರ್ಯರನ್ನು ಎಷ್ಟು ಸ್ಮರಣೆ ಮಾಡಿದರೂ ನಮಗೆ ತುಂಬಾ ಕಡಿಮೆ. ಅವರು ನಮಗೆ ಭಾಗವತದ ಉಪದೇಶ ಮಾಡುತ್ತಿರುವುದಲ್ಲದೇ ನಮ್ಮ ಕುಟುಂಬದ ಬಗ್ಗೆ ತುಂಬಾ ಅಭಿಮಾನದಿಂದ ಈ ಪುಸ್ತಿಕೆಯನ್ನು ತಮ್ಮ ತುಂಬಾ ಕೆಲಸದ ವೇಳೆಯಲ್ಲೂ ಬಿಡುವು ಮಾಡಿಕೊಂಡು ರಚಿಸಿ ಮಾರ್ಗದರ್ಶನ ಮಾಡಿದ್ದಾರೆ. ಅವರಿಗೆ ಎಷ್ಟು ಅಭಿವಂದನೆ ಸಲ್ಲಿಸಿದರೂ ಸಾಲದು. ಉಳಿದ ವಿಷಯವನ್ನೆಲ್ಲಾ ನಮ್ಮ ಮನೆಯ-ವರು ಬರೆದಿದ್ದಾರೆ. ಹೆಚ್ಚಿಗೆ ಬರೆಯಲು ಸಾಮರ್ಥ್ಯವಿಲ್ಲ. ಎಲ್ಲಾ ಗುರುಹಿರಿಯರ ಆಶೀರ್ವಾದದ ಅನುಗ್ರಹವು ನಮ್ಮ ಮಗ ಚಿ॥ಶ್ರೀನಿವಾಸದಂಪತಿಗಳು ಮತ್ತು ನವದಂಪತಿಗಳಾದ ಚಿ॥ಕು॥ಸೌ॥ರಮ್ಯಾ ಹಾಗೂ ಚಿ॥ವಿಶ್ವೇಶನಿಗೆ, ನಮ್ಮ ಕುಟುಂಬದ ಎಲ್ಲರಿಗೆ ಸಿಗಲಿ ಎಂದು ಬೇಡಿಕೊಳ್ಳುತ್ತೇನೆ.

**ಶ್ರೀಮತಿ ಸುಧಾ ಶೇಷಗಿರಿರಾವ್**

**(ವಿ.ಸೂ. ಈ ಕಿರುಹೊತ್ತಿಗೆಯು ಸನಾತನಧರ್ಮದ ಒಂದು ಶ್ರೇಷ್ಠದಿಗ್ದರ್ಶಕ-ಮಾರ್ಗದರ್ಶಕ ಕೃತಿ. ವರ ಹಾಗೂ ಕನ್ಯಾಪಿತೃಗಳಿಗೆ ವಧೂವರರಿಗೆ ಜೀವನದರ್ಶಿ. ಆದ್ದರಿಂದ ಈ ಕೃತಿಯನ್ನು ಮಾಧ್ವಯುವಪರಿಷತ್ MYP ಅಂತರ್ಜಾಲದಲ್ಲಿ ಆಸಕ್ತರಿಗೆಲ್ಲ ಸಿಕ್ಕಲಿ ಎಂದು ಬಿಡುಗಡೆ ಮಾಡಲಾಗಿದೆ.)**

# ಲೇಖಕನ ಭಾರದ ಆಭಾರ

ಅಲಸಿಗಳು ಕೆಲಸ ಮಾಡುವುದಕ್ಕೆ ಒತ್ತಡ ಹೇರುವ ಶಿಷ್ಯರು ಬೇಕು. ಅದಕ್ಕೂ ಕಾಲ- ಅದೃಷ್ಟ-ಈಶಪ್ರೇರಣೆ ಬೇಕು.

ವೇದಗರ್ಭ ಶೇಷಗಿರಿರಾಯರ ಕಿರಿಮಗ ಚಿ||ವಿಶ್ವೇಶನ ಮದುವೆ ನಿಶ್ಚಿತವಾಗಿ ನಾಲ್ಕೈದು ತಿಂಗಳು ಕಳೆದಿವೆ. 'ಉಪನಯನಕ್ಕೆ ಬರೆದ ಹಾಗೇ ವಿವಾಹಕ್ಕೊಂದು ಕೈಪಿಡಿ ಗೀಚಿಬಿಡಿ. ಮುಂದಿನ ಕೆಲಸ ನನ್ನದು' ಎಂಬ ಮಾತು ಅಂದೇ ಹಿರಿಮಗ ಶ್ರೀನಿವಾಸ ಅವರ ಬಾಯಲ್ಲಿ ಬಂದಿತ್ತು.

ಬರೆಯುವುದಕ್ಕೆ ಕಾಲ ಸಿಕ್ಕಿರಲಿಲ್ಲ. ಅಥವಾ ಕಾಲ ಕೂಡಿರಲಿಲ್ಲ. ಪುಸ್ತಕ ಎಷ್ಟೇ ಚಿಕ್ಕದಾಗಿರಲಿ, ಪುಸ್ತಕವಂತೂ ಮದುವೆಯ ದಿನಕ್ಕೆ ಹೊರಬರಲೇಬೇಕು ಎಂಬ ಪ್ರೀತಿಯ ಒತ್ತಾಯಕ್ಕೆ ಕಟ್ಟುಬಿದ್ದೆ.

ಅವಸರದಲ್ಲಿ ಗೀಚತೊಡಗಿದೆ. ಅದನ್ನು ಸರಿಗೊಳಿಸಿ ಕರಡುಪ್ರತಿಯನ್ನು ಸಿದ್ಧಗೊಳಿಸುವ ಭಾರ ನನ್ನಾಕೆ ತಾನೇ ಹೊತ್ತಳು. ಉಳಿದವರಿಗೆ ಅರ್ಥವಾಗದ ನನ್ನ ಅಕ್ಷರ ಈಕೆಗೆ ಅರ್ಥವಾಗಿದೆ.

ಈ ಬರಹದ ಹಿಂದಿರುವ ಹಲವು ಶಕ್ತಿಗಳಿಗೆ ನನ್ನ ನಮನ.

ಕರುಣೆಯ ಕಡಲು ಶ್ರೀಪೇಜಾವರ ಶ್ರೀಗಳು. ಪರಮಪೂಜ್ಯ ಶ್ರೀವಿಶ್ವೇಶತೀರ್ಥರು ಹೊಟ್ಟೆ ತುಂಬಿಸಿ, ತಲೆ ತುಂಬಿಸಿದ ನಲ್ಮೆಯ ಗೌರವಾಸ್ಪದ ಗುರುಗಳು. ವಿಶ್ವಬಂಧು ಗುರುಗಳಿಗೆ ಈ ಚಿಕ್ಕ ಶಿಷ್ಯ ಏನು ಕೊಡಬಲ್ಲ. ಪೌನಃಪುನ್ಯೇನ ಪ್ರಣಾಮಗಳನ್ನು ಮಾತ್ರ.

ಪರಮಪೂಜ್ಯ ಶ್ರೀವಿದ್ಯೇಶತೀರ್ಥರಂತಹ ಜ್ಞಾನಿಗಳ ವಿರಕ್ತಪರಮಹಂಸರ ಆಶೀರ್ವಚನ ಈ ಪುಸ್ತಿಕೆಗೆ ಲಭಿಸಿದೆ. ಪೂಜ್ಯವರೇಣ್ಯರಿಗೆ ಸಭಕ್ತಿಪ್ರಣಾಮಗಳು.

ವಿದ್ಯಾಪೀಠದಲ್ಲಿ ನನ್ನ ಜ್ಞಾನದ ಹರವನ್ನು ವಿಸ್ತರಿಸಿ ಹರಸುತ್ತಿರುವವರು ಸಹೃದಯ ವಿದ್ವಾಂಸರಾದ ಶ್ರೀಯುತ ಡಿ. ಪ್ರಹ್ಲಾದಾಚಾರ್ಯರು. ಅಧ್ಯಾಪನದ ಮೂಲಕ ಮುದ್ರೆಯೊತ್ತಿ ನನ್ನಲ್ಲೂ ಚಿಕ್ಕ ಅಧ್ಯಾಪಕನನ್ನು ಸೃಜಿಸಿದ ಕೌಶಲ್ಯ ಶ್ರೀಯುತ ಎ. ಹರಿದಾಸಭಟ್ಟರದು. ಈ ಹೊತ್ತಿಗೆಗೆ ಆಶೀರ್ವದಿಸಿ ಬರೆದ ಉಭಯ ಸಹೃದಯಿ ವಾದಿದಿಗ್ಗಜರಿಗೂ ನನ್ನ ನಮನ.

ಎರಡು ಮೂರು ದಿನಗಳಲ್ಲಿ ಅಕ್ಷರ ಜೋಡಿಸಿ, ನನ್ನ ಮೂಲಕ ಮತ್ತೆ ಬರೆಸಿ ಆಶೀರ್ವಚನಗಳನ್ನು ಒಟ್ಟು ಗೂಡಿಸಿ, ಅಚ್ಚುಹಾಕಿಸಿ ಪುಸ್ತಕವನ್ನು ಹೊರತಂದುದು ಒಂದು ಸಾಹಸ. ವೇದಗರ್ಭ ಶೇಷಗಿರಿರಾಯರ ಹಿರಿಯ ಪುತ್ರ ಶ್ರೀಯುತ ಶ್ರೀನಿವಾಸ ಇವರು ಸಾಹಸವನ್ನು ತಲೆಯಲ್ಲಿ ಹೊತ್ತಿದ್ದಾರೆ. ಅವರ ಮೂಲಕ ಈ ಕೆಲಸ ಮಾಡಿಸಿದ ಆ ವೀರಹನುಮನಿಗೆ ಶ್ರೀರಾಮಚಂದ್ರನಿಗೆ ಮತ್ತೆ ಮತ್ತೆ ನನ್ನ ಪ್ರಣಾಮ.

ಹಿಂದಿನಿಂದ ಮುಂದಿನಿಂದ ಸಹಕರಿಸಿದ ಸರ್ವರಿಗೂ ಮಧ್ವವಲ್ಲಭ ರುಗ್ಮಿಣೀಶನ ಅನುಗ್ರಹವನ್ನು ಪ್ರಾರ್ಥಿಸಿ ವಂದಿಸುತ್ತೇನೆ.

ಈ ಪುಸ್ತಿಕೆಯ ಪ್ರಕಾಶಕ್ಕೆ ನಿಮಿತ್ತರಾದವರು **ಶ್ರೀಯುತ ಶೇಷಗಿರಿರಾಯರು**. ತಮ್ಮ ಅರವತ್ತಕ್ಕೆ ಮೇಲ್ಪಟ್ಟ ವಯಸ್ಸಿನಲ್ಲೂ ಚಂದ್ರಿಕೆಯಂತಹ ಗ್ರಂಥಗಳನ್ನು ಓದುವ ಅರ್ಥೈಸಿಕೊಳ್ಳುವ ಹುಮ್ಮಸ್ಸು ಅವರದು. ಪಾಠಪ್ರವಚನಗಳ ಮೂಲಕ ಹರಿಗುರು-ಸೇವಾರತರು. ಈ ಪುಸ್ತಕಪ್ರಕಾಶನದ ಆರ್ಥಿಕಭಾರವನ್ನು ಮಾತ್ರವಲ್ಲದೆ ಅಕ್ಷರ ತಿದ್ದುವ ಭಾರವೂ ಅವರದೇ. ವರೇಣ್ಯರಿಗೆ ನನ್ನ ಅಭಿನಂದನೆಗಳು. ಅವರ ಈ ಕಾರ್ಯಕ್ಕೆ ಪ್ರೇರಣೆ ಕೊಟ್ಟ ವಧೂವರರಿಗೆ ಲಕ್ಷ್ಮೀರಮಣ ಒಳಿತು ಮಾಡಲಿ.

ಸಜ್ಜನರ ವಿಧೇಯ

3.11.2009 **ಹೆಚ್. ಸತ್ಯನಾರಾಯಣಾಚಾರ್ಯ.**

# ವಿಷಯಾನುಕ್ರಮಣಿಕಾ



– – – –

ನ್ಯಾಯಾರ್ಜಿತಧನಸ್ತತ್ವಜ್ಞಾನನಿಷ್ಠೋऽತಿಥಿಪ್ರಿಯಃ ।
ಶಾಸ್ತ್ರವಿತ್ ಸತ್ಯವಾದೀ ಚ ಗೃಹಸ್ಥೋऽಪಿ ವಿಮುಚ್ಯತೇ ॥

ಪ್ರಾಮಾಣಿಕತೆಯಿಂದ ಸಂಪಾದನೆ, ತತ್ವಜ್ಞಾನದಲ್ಲಿ ಆಸಕ್ತಿ, ಅತಿಥಿ-ಸತ್ಕಾರದಲ್ಲಿ ತತ್ಪರತೆ, ಶಾಸ್ತ್ರಜ್ಞಾನ, ಸತ್ಯವಚನ, ಇವು ಉಳ್ಳವ ಗೃಹಸ್ಥನಾದರೇನಂತೆ? ಅವನಿಗೂ ಮುಕ್ತಿಯಿದೆ.

* * * * *

# ವಿವಾಹ – ಒಂದು ಕೈಪಿಡಿ

**ಜೀ**ವನವು ಹುಡುಗಾಟವಲ್ಲ. ಅದು ನಿಜನೆಲೆಯ ಹುಡುಕಾಟ. ಈ ಹುಡುಕಾಟ ಏಕಾಂಗಿಯಿಂದ ದುಃಶಕ. ಅರ್ಧಾಂಗಿಯ ಜತೆ ಸೇರಿದ ಸಕಲಾಂಗನು ಈ ದಾರಿಯನ್ನು ಸವೆಸಬಲ್ಲ. ಗಂಡು ಹೆಣ್ಣಿಗೆ ಊರುಗೋಲು. ಹೆಣ್ಣು ಗಂಡಿಗೆ ಕೈದೀವಿಗೆ.

'ಗಂಡು ಹೆಣ್ಣುಗಳಲ್ಲಿ ಭೇದ ಮಾಡಬೇಡಿ' ಎಂದು ಸಾವಿರಬಾರಿ ಬಡಬಡಿಸಿದರೂ ಇರುವ ಭೇದ ಹೋಗಲಾರದು. ಹೆಣ್ಣಿಗೆಂದೂ ಮೀಸೆ ಬೆಳೆಯಲಾರದು. ಗಂಡಿಗೆಂದೂ ಎದೆ ಬಲಿಯಲಾರದು.

ಮೀಸೆ ಚಿಗುರಿ ದಪ್ಪವಾಗುತ್ತಿದ್ದಂತೆ ಗಂಡು ದುರ್ದಾಂತನಾಗತೊಡಗುತ್ತಾನೆ. ಮದ, ಬಿಗುಮಾನಗಳು ತುಂಬ ತೊಡಗುತ್ತವೆ. 'ಮೀಸೆ ಬಂದವನಿಗೆ ದೇಶ ಕಾಣುವು-ದಿಲ್ಲ' ಎಂಬ ಗಾದೆ ಹುಟ್ಟಿಕೊಂಡಿದೆ. ಅತ್ತ 'ಮೊಲೆ ಬಂದವಳಿಗೆ ನೆಲ ಕಾಣುವುದಿಲ್ಲ' ಎಂಬ ಗಾದೆಯೂ ಜನಜನಿತವಾಗಿದೆ. **'ಪ್ರಾಪ್ತೇ ತು ಷೋಡಶೇ ವರ್ಷೇ ಗರ್ದಭೀ ಚಾಪ್ಸರಾಯತೇ'** ವಯಸ್ಸಿಗೆ ಬಂದ ಹೆಣ್ಣು ತಾನು ಕತ್ತೆಯಂತಿದ್ದರೂ ಅಪ್ಸರೆಯ ಹೆಜ್ಜೆ ಹಾಕತೊಡಗುತ್ತಾಳೆ. ಈ ಸ್ಥಿತಿಯ ಗಂಡು-ಹೆಣ್ಣುಗಳಿಂದ ಲೋಕ ಕೆಡಬಾರದು. ಅವ್ಯವಸ್ಥೆಯುಂಟಾಗಬಾರದು. ಅದಕ್ಕಾಗಿ ಒಂದು ಗಂಡು ಹೆಣ್ಣಿನ ಕೈಹಿಡಿದು ನಡೆಯುವ ವ್ಯವಸ್ಥೆಯನ್ನು ಋಷಿಮುನಿಗಳು ತಂದರು. ''ಎಂದೂ ಕೈಬಿಡಲಾರೆ'' ಎಂಬ ಪ್ರತಿಜ್ಞೆ-ಯೊಂದಿಗೆ ಮೊದಲಬಾರಿ ಗಂಡು ಹೆಣ್ಣಿನ ಕೈಹಿಡಿಯುವುದೇ - **ವಿವಾಹ, ಪಾಣಿ-ಗ್ರಹಣ.**

## ಗೃಹಸ್ಥನ ಹೆಚ್ಚುಗಾರಿಕೆ

**ನೈ**ಮಿಷಾರಣ್ಯದ ಸನಿಹದ ಗುರುಕುಲ ಅದು. ನಾಲ್ಕು ಮಂದಿ ಓದು ಮುಗಿಸಿದ್ದರು. ಸಮಾವರ್ತನೆಯಾಯಿತು. **'ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ'.** 'ಅನುರೂಪ ಕನ್ಯೆಯೊಡನೆ ವಿವಾಹವಾಗಿ ವಂಶಕುಡಿಯನ್ನು ಮುಂದುವರೆಸು' ಎಂಬ ಅನುಶಾಸನ ಗುರುಗಳದ್ದು. ವಿದ್ಯಾರ್ಥಿಗಳು ತಮ್ಮ ಮನೆಯ ದಾರಿ ಹಿಡಿದು ಹೊರಟರು. ಭವಿಷ್ಯಜೀವನದ ಬಗೆಗೆ ಚಿಂತನೆ ನಡೆಯಿತು. 'ಮದುವೆಯಾಗುವುದೆಂದರೆ ದೊಡ್ಡ ಬಂಧನದಲ್ಲಿ ಸಿಲುಕಿದಂತೆ. ಪ್ರಪಾತದಲ್ಲಿ ಬಿದ್ದಂತೆ. ನಮ್ಮನ್ನು ನಾವು ಮಾರಾಟ ಮಾಡಿಕೊಂಡಂತೆ. ಅಲ್ಲಿ ಅಧ್ಯಾತ್ಮಸಾಧನೆ ಅಶಕ್ಯ. ಹಾಗಾಗಿ ನಾವು ಕನ್ಯಾರ್ಥಿಗಳಾಗ-ತಕ್ಕದ್ದಲ್ಲ' - ಹೀಗೆಂದು ಯೋಚಿಸಿ, ಇವರು ಕಾಡಿನ ಹಾದಿ ಹಿಡಿದರು. ಇವರ

ಅಚಾತುರ್ಯವನ್ನು ಕಂಡ ದೇವೇಂದ್ರ ಒಂದು ವೃಕ್ಷದ ಮೇಲೆ ಹಕ್ಕಿಯಾಗಿ ಕಾಣಿಸಿಕೊಂಡ.

''ಹೇಡಿಗಳಿರಾ!'' ಎಂದು ಸಂಬೋಧಿಸಿದ. 'ಸಂಸಾರಸಾಗರದಲ್ಲಿ ಧೈರ್ಯದಿಂದ ಧುಮುಕಿ, ಪತ್ನೀಸುತರ ಸಾಧನೆಗೆ ಅನುವಾಗುವುದರ ಜೊತೆಗೆ ಸ್ವಾತ್ಮಸಾಧನೆಯನ್ನು ಮಾಡಿಕೊಳ್ಳುವ ವಿಪುಲಾವಕಾಶವನ್ನು ಗಾಳಿಗೆ ತೂರಿ, ಪುಕ್ಕಲುತನದಿಂದ ತಪಸ್ಸಿಗಾಗಿ ಹೊರಟಿರುವಿರಲ್ಲಾ' ಎನ್ನುತ್ತ, ಗಾರ್ಹಸ್ಥ್ಯದ ಮಹತ್ವವನ್ನು ಕೊಂಡಾಡಿದ. ನಿಮ್ಮ ಈ ತೀರ್ಮಾನದ ಹಿಂದಿನ ಕಾರಣ ಹೇಡಿತನವೇ ಹೊರತು, ನಿಜವಾದ ವೈರಾಗ್ಯವಲ್ಲ ಎಂಬುದನ್ನು ಬಹಿರಂಗಗೊಳಿಸಿದ. ಓದು ಮುಗಿಸಿದ್ದ ಇವರು ಇದೀಗ ವಿದ್ವಾಂಸರಾದರು. ತಮ್ಮ ನಿರ್ಧಾರಕ್ಕೆ ನಾಚಿಕೆಗೊಂಡರು. ಊರಿಗೆ ಬಂದು ವಿವಾಹವಾಗಿ ಸಮೃದ್ಧ ಸುಖೀಸಂಸಾರ ನಡೆಸಿದರು.

ಮಹಾಭಾರತದ ಶಾಂತಿಪರ್ವದಲ್ಲಿ ಬಂದ ಕಥೆ ಇದು.

ಮನುಸುತನಾದ ಈತ ನಾರದರ ಶಿಷ್ಯ. ಹೆಸರು ಪ್ರಿಯವ್ರತ. ಗೃಹಸ್ಥಾಶ್ರಮವನ್ನು ತುಚ್ಛವೆಂದು ಮನಗಂಡು, ವಾನಪ್ರಸ್ಥವನ್ನು ಕೈಗೊಂಡಿದ್ದ. ಅಜ್ಜ ಬ್ರಹ್ಮ ಬಂದು ಬುದ್ಧಿ ಹೇಳಿದ - ''ಮಗನೇ! ಕಾಮಕ್ರೋಧಾದಿ ದುಷ್ಟಭಾವಕ್ಕೆ ಸಿಲುಕಿದ ಪ್ರಮತ್ತನಿಗೆ ಕಾಡು ಕೂಡ ಸಾಧನೆಗೆ ಅನುಕೂಲವಾಗದು. ಅದಿಲ್ಲದ ಶುದ್ಧಮನಸ್ಕನಿಗೆ ಗಾರ್ಹಸ್ಥ್ಯವೂ ಸಾಧನೆಗೆ ಬಾಧಕವಾಗಲಾರದು. ನೀನು ಜಿತೇಂದ್ರಿಯನಿದ್ದಿ. ಆತ್ಮಾರಾಮನಾಗಿದ್ದಿ. ತತ್ತ್ವವೇತ್ತನಿದ್ದಿ. ಗಾರ್ಹಸ್ಥ್ಯದಲ್ಲಿ ನಿನಗೇತರ ಭಯ? ಹೋಗು. 'ಜಿತೇಂದ್ರಿಯಸ್ಯಾ-**ತ್ಮರತೇರ್ಬುಧಸ್ಯ ಗೃಹಾಶ್ರಮಃ ಕಿಂ ನು ಕರೋತ್ಯವದ್ಯಮ್**'. ಮದುವೆಯಾಗು. ರಾಜ್ಯವಾಳು''. ಪ್ರಿಯವ್ರತ ಎರಡು ಮದುವೆಯಾಗಿ ಹದಿಮೂರುಮಕ್ಕಳ ತಂದೆಯಾದ.

ಸಾಧನೆಗೆ ನಾಲ್ಕು ಮಜಲುಗಳು. ಇದನ್ನೇ ಚತುರಾಶ್ರಮವೆಂದರು. ಓದುವ ಅಭ್ಯಸಿಸುವ ಸ್ಥಿತಿ **ಬ್ರಹ್ಮಚರ್ಯ**. ಓದಿದ್ದನ್ನು ಹೇಳುವುದಕ್ಕೋಸ್ಕರ, ವಿದ್ಯಾರ್ಥಿಗಳಿಗೆ ಅನ್ನವಿಟ್ಟು ಮುಂದಿನ ಜ್ಞಾನವಾಹಕಪರಂಪರೆಗಾಗಿ ಸಂತತಿಯನ್ನು ಬೆಳೆಸುವ ಸ್ಥಿತಿ **ಗಾರ್ಹಸ್ಥ್ಯ**. ಜವಾಬ್ದಾರಿಗಳನ್ನು ಕಳೆದುಕೊಂಡು ಹೆಂಡತಿಯರೊಡನೆ ಸಾಧನೆಗಾಗಿ ಮನೆ ಬಿಡುವುದು **ವಾನಪ್ರಸ್ಥ**. ಹೆಂಡತಿಗೂ ಕೈಕೊಟ್ಟು ರಹಸ್ಯಗಳನ್ನು ಮುಚ್ಚಿಟ್ಟುಕೊಂಡಿರುವ ಉಪನಿಷದ್ಯೋಷೆಯೊಡನೆ ರಮಿಸುವ ಊರ್ಧ್ವಸ್ಥಿತಿ **ಸನ್ನ್ಯಾಸ**.

ಇವುಗಳಲ್ಲಿ ಯಾವುದು ಶ್ರೇಷ್ಠ? ಎಲ್ಲವೂ ಹೌದು. ಆಯಾ ಕಾಲಕ್ಕೆ ಪರಿಸ್ಥಿತಿಗೆ ತಕ್ಕ ಹಾಗೆ ಎಲ್ಲವೂ ಶ್ರೇಷ್ಠವೇ. ಆದರೆ ಗಾರ್ಹಸ್ಥ್ಯಕ್ಕೆ ಒಂದು ಹೆಚ್ಚುಗಾರಿಕೆ ಇದೆ.

ಗೃಹಸ್ಥನಿಲ್ಲದೆ ಉಳಿದ ಆಶ್ರಮಗಳು ಉಸಿರಾಡಲಾರವು. ಗಾಳಿಯಿಂದ ಜಂತುಗಳು ಬದುಕುವಂತೆ ಗೃಹಸ್ಥನಿಂದ ಚತುರಾಶ್ರಮಗಳು.

**ಯಥಾ ವಾಯುಂ ಸಮಾಶ್ರಿತ್ಯ ವರ್ತಂತೇ ಸರ್ವಜಂತವಃ ।**

**ತಥಾ ಗೃಹಸ್ಥಮಾಶ್ರಿತ್ಯ ವರ್ತಂತೇ ಚತುರಾಶ್ರಮಾಃ ॥**

ಬ್ರಹ್ಮಚಾರಿಗೆ ಅನ್ನ ಹಾಕುವವ ಗೃಹಸ್ಥ. ಸನ್ನ್ಯಾಸಿಗೆ ಭಿಕ್ಷೆ ನೀಡುವವನೂ ಇವನೇ. ಹೆಣ್ಣುಮಗಳನ್ನು ಸಾಕಿ, ಸಲಹಿ ಕನ್ಯಾದಾನ ಮಾಡಿ ಇನ್ನೋರ್ವ ಗೃಹಸ್ಥನ ನಿರ್ಮಾತೃವೂ ಈ ಗೃಹಸ್ಥನೇ.

## ಹದಿನಾರರಲ್ಲಿ ಕೊನೆಯದು

ಗೃಹಸ್ಥನಾಗುವುದಕ್ಕಾಗಿ ಒಂದು ಸಂಸ್ಕಾರವಿದೆ. ಅದು ವಿವಾಹ. ಇದು ಷೋಡಶ ಸಂಸ್ಕಾರಗಳಲ್ಲಿ ಕೊನೆಯದು.

ಗರ್ಭದಲ್ಲಿ ಪ್ರವೇಶಿಸಿ ಸರಿಯಾಗಿ ಬೆಳೆದು ಸುಖಪ್ರಸವಕ್ಕಾಗಿ **ಗರ್ಭಾಧಾನ, ಪುಂಸವನ, ಸೀಮಂತ, ವಿಷ್ಣುಬಲಿ**ಗಳೆಂಬ ನಾಲ್ಕು ಸಂಸ್ಕಾರಗಳು. ಗರ್ಭದಲ್ಲಿ ಗರ್ಭಜಲವನ್ನು ಕುಡಿದ ದೋಷದ ಹಾಗೂ ಪುರುಷನ ಬೀಜ ಹಾಗೂ ಸ್ತ್ರೀಗರ್ಭವೆಂಬ ಶುಕ್ಲಶೋಣಿತಸಂಬಂಧದ ಕೊಳೆ ತೊಳೆಯುವುದಕ್ಕಾಗಿ **ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ** ಹಾಗೂ **ಚೌಲ**ವೆಂಬ ಐದು ವಿಧಿಗಳು. ಈ ಒಂಭತ್ತರಿಂದ ತೊಳೆದ ಶುದ್ಧವಾದ ಪಾತ್ರೆಯಲ್ಲಿ ಜ್ಞಾನರಸತುಂಬುವುದಕ್ಕಾಗಿ **ಉಪನಯನ, ಮಹಾನಾಮ್ನೀ, ಮಹಾವ್ರತ, ಉಪನಿಷತ್** ಎಂಬ ನಾಲ್ಕು ಸಂಸ್ಕಾರಗಳು. ಗಡ್ಡ, ಕೂದಲು ತೆಗೆದು ಶುದ್ಧನಾಗಿ ಸ್ನಾತಕನಾಗುವುದಕ್ಕಾಗಿ **ಗೋದಾನ, ಸಮಾವರ್ತನಗಳು.** ಈ ಹದಿನೈದು ಸಂಸ್ಕಾರಗಳು ನಡೆದರೂ ಈತ ಅರ್ಧ ಮಾತ್ರ. ಪೂರ್ಣನಲ್ಲ. ಇನ್ನರ್ಧ ತುಂಬುವುದಕ್ಕಾಗಿ ಹದಿನಾರನೆಯದು ಈ **ವಿವಾಹ.** ಆದ್ದರಿಂದಲೇ ಇದು **ಊನಾಂಗ-ಪೂರಣಸಂಸ್ಕಾರ.** ವಿವಾಹದ ಮೂಲಕ **ಊನ**ವಾಗಿದ್ದ ಅಂಗದಿಂದ ತುಂಬಿ ಪೂರ್ಣ-ನಾಗುತ್ತಾನೆ. ದ್ವಿಪಾದನು ಚತುಷ್ಪಾದನಾಗುತ್ತಾನೆ.

ಪಾದವೆಂದರೆ ಕಾಲು. ಕಾಲುಭಾಗವೂ(¼) ಹೌದು. ಎರಡು ಪಾದವೆಂದರೆ (¼+¼) ಅರ್ಧವಷ್ಟೇ ಆಯಿತು. ಹಾಗಾಗಿಯೇ ಒಂದು ಅಧ್ಯಾಯ ಪೂರ್ಣವಾಗ-ಬೇಕಾದರೆ 4ಪಾದಗಳಿರಬೇಕು. ಒಂದು ಶ್ಲೋಕವೂ ನಾಲ್ಕು ಪಾದಗಳಿಂದ ತುಂಬಿದೆ. ಮದುವೆಯಲ್ಲಿ ಎರಡು ಕಾಲಿಗೆ ಇನ್ನೆರಡು ಕಾಲು ಸೇರುತ್ತದೆ. ದ್ವಿಪದನು ಚತುಷ್ಪಾತ್ ಆಗುತ್ತಾನೆ. ಹಾಗಾಗಿಯೇ ಇದು **ಊನಾಂಗಪೂರಣಸಂಸ್ಕಾರ.**

# ಎರಡು ಸಾಲ ತೀರಿಸಲು ಒಂದು ಮದುವೆ

ಮನುಜ ಹುಟ್ಟುವಾಗಲೇ ಮೂರು ಸಾಲಗಳನ್ನು ಹೊತ್ತು ಹುಟ್ಟಿರುತ್ತಾನೆ. ಎಂಭತ್ತನಾಲ್ಕುಲಕ್ಷಯೋನಿಗಳಲ್ಲಿ ಒಂದು ಈ ಮಾನುಷಯೋನಿ. ಒಂದು ಜೀವ ಮಾನುಷಯೋನಿಯಲ್ಲಿ ಹುಟ್ಟುವುದೆಂಬುದು ದೈವೀ ಅನುಗ್ರಹದ ಫಲ. ಗರ್ಭದಲ್ಲಿ ಒಂಭತ್ತು ತಿಂಗಳು ಬೆಳೆಯುವಿಕೆಯೆಂಬುದೂ ಒಂದು ಅದ್ಭುತ. ಗರ್ಭದಲ್ಲಿ ರಕ್ಷಿಯಿತ್ತವರು ಸಿನೀವಾಲೀ, ಸರಸ್ವತೀ, ಅಶ್ವಿನೀ ಮೊದಲಾದ ದೇವತೆಗಳು. ಈ ಎಲ್ಲಾ ದೇವತೆಗಳ ಋಣಭಾರ ನಮ್ಮ ಮೇಲಿದೆ. ಇದು **ದೇವಋಣ.** ಹೊಟ್ಟೆಯಲ್ಲಿ ಹೊತ್ತು ಹೆತ್ತು ಬೆಳೆಸಿದ ತಂದೆ-ತಾಯಿಯರ ಋಣ **ಪಿತೃಋಣ.** ಗರ್ಭದಲ್ಲಿ ನಾವು ಸಂಸ್ಕಾರವನ್ನು ಪಡೆದುದು ಋಷಿಮುನಿಗಳು ತಪೋಬಲದಿಂದ ಕಂಡ ವೇದಮಂತ್ರಗಳಿಂದ. ಒಬ್ಬ ವ್ಯಕ್ತಿಯನ್ನು ಸುಸಂಸ್ಕೃತನನ್ನಾಗಿಸುವುದಕ್ಕಾಗಿ ಗರ್ಭಾಧಾನ, ಸೀಮಂತಾದಿ ವಿಧಿಗಳನ್ನು ದಿವ್ಯದೃಷ್ಟಿಯ ಋಷಿಗಳು ಕಂಡು ನಮಗಿತ್ತರು. ಆ ಸಂಸ್ಕಾರಗಳ ಬಲದಿಂದ ಇಂದು ನಾವು ಸುಸಂಸ್ಕೃತರಾಗಿ ಬಾಳಿದ್ದೇವೆ. ಇದೇ **ಋಷಿಋಣ.**

ಈ ಮೂರನ್ನು ತೀರಿಸುವುದು ಹೇಗೆ? '**ಯಜ್ಞೇನ ದೇವೇಭ್ಯಃ ಬ್ರಹ್ಮಚರ್ಯೇಣ ಋಷಿಭ್ಯಃ ಪ್ರಜಯಾ ಪಿತೃಭ್ಯಃ**' ಎಂದಿದೆ ಐತರೇಯಬ್ರಾಹ್ಮಣ. ವೇದಾಧ್ಯಯನದಿಂದ ಅರ್ಥಾತ್ ಋಷಿಮುನಿಗಳು ಕೊಟ್ಟ ಜ್ಞಾನಪರಂಪರೆಯನ್ನು ಉಳಿಸಿ ಬೆಳೆಸುವುದರಿಂದ ಋಷಿಋಣದ ಅಪಾಕರಣ. ಅದು ಉಪನಯನದಿಂದ ಈಡೇರಿದೆ. ಇನ್ನೆರಡು ಋಣಗಳ ಪರಿಹಾರಕ್ಕಾಗಿ ಮದುವೆ.

**ಔಪಾಸನಯಜ್ಞದ** ಮೂಲಕ ದೇವತಾರಾಧನೆಯಿಂದ ದೇವಋಣದ ಪರಿಹಾರ. ಪಿಂಡದಾನಾದಿಗಳ ಮೂಲಕ ಪಿತೃಗಳ ಉದ್ಧಾರವನ್ನು ಮಾಡಬಲ್ಲ **ಸತ್ಸಂತತಿಯನ್ನು ಪಡೆಯುವುದರಿಂದ** ಪಿತೃಋಣದ ಪರಿಹಾರ. ಇವೆರಡೂ ಈಡೇರುವುದು ವಿವಾಹ-ದಿಂದ. ಅಪತ್ನೀಕನಿಗೆ ಯಜ್ಞಾಧಿಕಾರವಿಲ್ಲ. '**ಅಯಜ್ಞೋ ವಾ ಏಷ ಯೋಽಪತ್ನೀಕಃ (ತೈತ್ತಿರೀಯಬ್ರಾಹ್ಮಣ ೩-೨)**' ಎಂಬ ಶ್ರುತಿಯನ್ನು ನಾವು ಕೇಳಿದ್ದೇವೆ. ಸಂಸ್ಕಾರಶಾಲಿ-ಯಾದ ದೈವನಿಷ್ಠಸತ್ಸಂತತಿಯೂ ವಿವಾಹದಿಂದಲ್ಲದೇ ಬೇರೆ ರೀತಿಯಿಂದ ಅಶಕ್ಯ.

ಹಾಗಾಗಿಯೇ ವಿವಾಹದ ಸಂಕಲ್ಪ ಹೀಗೆ -- **ದೇವಪಿತೃಋಣಾಪಕರಣ-ಹೇತುಭೂತಧರ್ಮಪ್ರಜೋತ್ಪಾದನಾರ್ಥಂ** ವಿವಹಿಷ್ಯೇ ॥ ಇಲ್ಲಿ ಧರ್ಮವೆಂದರೆ ಯಜ್ಞ ಯಾಗಾದಿಗಳು. ಪ್ರಜೆಯೆಂದರೆ ಯೋಗ್ಯಮಕ್ಕಳು. ದೇವಋಣಪರಿಹಾರಕ್ಕಾಗಿ

ಧರ್ಮೋತ್ಪಾದನೆ. ಪಿತೃಋಣಪರಿಹಾರಕ್ಕಾಗಿ ಪ್ರಜೋತ್ಪಾದನೆ. ಇವೆರಡೂ ವಿವಾಹದಿಂದ ಶಕ್ಯ.

ಪುರುಷರಿಗೆ ಹೀಗೆ ಸಾಲ ತೀರಿಸುವ ಬಗೆ ತಿಳಿಯಿತು. ಆದರೆ ಸ್ತ್ರೀಯರಿಗೆ ಹೇಗೆ? 'ತನ್ನ ಗಂಡನ ಯಜ್ಞಾನುಷ್ಠಾನ, ಮಕ್ಕಳ ವೇದಾಧ್ಯಯನಕ್ಕೆ ಸಹಕರಿಸುವುದರಿಂದಲೇ ಈಕೆಗೆ ಋಣಾಪಕರಣ' ಎಂದಿದ್ದಾರೆ ಅಭಿಯುಕ್ತರು. ತಾನೋರ್ವಳು ಮಾತ್ರ ವೇದಾ-ಧ್ಯಯನ ಮಾಡಿ ಮಕ್ಕಳ ವಿದ್ಯಾಭ್ಯಾಸಕ್ಕೆ ಪೆಟ್ಟುಕೊಡುವುದಕ್ಕಿಂತ, ಮಕ್ಕಳನ್ನು ಚೆನ್ನಾಗಿ ಓದಿಸಿದರೆ ಸಾಕೆಂದರು ಅವರು.

ಅಧ್ಯಯನ ಮಾಡುವುದು ಪುಣ್ಯಪ್ರದಕಾರ್ಯ. ಅದಕ್ಕಿಂತಲೂ ಅಧ್ಯಾಪನ ಶ್ರೇಷ್ಠ. ಇದಕ್ಕಿಂತಲೂ ಅಧ್ಯಯನ ಮಾಡುವವರಿಗೆ ಅನುಕೂಲಮಾಡಿಕೊಡುವ ಕೆಲಸ ಹೆಚ್ಚಿನದು. ಪಾಠ ಹೇಳಿದ್ದರಿಂದ ವಸಿಷ್ಠರಿಗೆ ಬಂದ ಪುಣ್ಯಕ್ಕಿಂತ ಆ ಶಿಷ್ಯರಿಗೆ ಅನ್ನಹಾಕಿದ ಅರುಂಧತಿಯೇ ಹೆಚ್ಚು ಪುಣ್ಯಭಾಗಿನಿ.

## ವಿವಾಹಶಬ್ದಾರ್ಥ

'ವಹ' ಎಂಬ ಮೂಲಧಾತುವಿಗೆ ಹೊರುವಿಕೆ ಎಂದರ್ಥ. ವಿ ಎಂದರೆ ವಿಶೇಷ-ವಾಗಿ. ವಿವಾಹ ಎಂಬ ಶಬ್ದಕ್ಕೆ 'ವಿಶೇಷವಾಗಿ ಹೊರುವುದು' ಎಂದರ್ಥವಾಗುತ್ತದೆ.

ಬ್ರಹ್ಮಚಾರಿಗೆ ಯಾವುದೇ ಜವಾಬ್ದಾರಿ ಇರುವುದಿಲ್ಲ. ಗುರುಕುಲದಲ್ಲಿ ಭೈಕ್ಷದಿಂದ ಆತನ ಜೀವನ ಸಾಗಿತ್ತು. ಗಾರ್ಹಸ್ಥ್ಯ ಸ್ವೀಕಾರವೆಂದರೆ ಅದು ಕೌಟುಂಬಿಕ, ಸಾಮಾಜಿಕ ಜವಾಬ್ದಾರಿಗಳನ್ನು ಹೊತ್ತುಕೊಳ್ಳುವಿಕೆ. ಜೀವನಸಂವಹನಕ್ಕಾಗಿ ಈತನ ವಿವಹನ. ಆದ್ದರಿಂದಲೇ ಇದು ವಿವಾಹ.

'ವಿವಹನ'ವೆಂದರೆ ವಿಶೇಷವಾಗಿ ಒಯ್ಯುವುದು ಎಂದೂ ಅರ್ಥ. ವರ ಕನ್ಯೆಯನ್ನು ಬೇರೆ ಮನೆಗೆ ಒಯ್ಯುತ್ತಾನೆ. **'ಸ್ವಗೋತ್ರಾತ್ ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ'**. ವಿವಾಹದ ಸಪ್ತಪದಿಯಿಂದ ಕನ್ಯೆ ಪಿತೃಗೋತ್ರದಿಂದ ಬಿಡುಗಡೆಗೊಂಡು ಪತಿಗೋತ್ರಕ್ಕೆ ಸೇರಿಬಿಡುತ್ತಾಳೆ. ಹೀಗೆ ವೈಶಿಷ್ಟ್ಯಪೂರ್ವಕವಾಗಿ ಕನ್ಯೆಯನ್ನು ಪತಿಯ ಗೋತ್ರಕ್ಕೆ ಮತ್ತು ಮನೆಗೆ ಒಯ್ಯುವಿಕೆ ವಿವಾಹ. **ವಿವಾಹ, ಪರಿಣಯ, ಪಾಣಿ-ಗ್ರಹಣ, ಉದ್ವಾಹ** ಮುಂತಾದ ಶಬ್ದಗಳು ವಿವಾಹ ಎಂಬ ಶಬ್ದದ ಪರ್ಯಾಯಗಳು.

**ಉನ್ನಯನ, ಉದ್ವಹನ** ಎಂದರೆ ಮೇಲಕ್ಕೆತ್ತುವುದು. ಸ್ತ್ರೀಯರಿಗೆ ವಿವಾಹವೇ ಉಪನಯನಕ್ಕೆ ಸಮಾನವಾದ ಸಂಸ್ಕಾರ. **'ಸ್ತ್ರೀಣಾಮುದ್ವಾಹಕರ್ಮೈವ ಯಥೋ-**

**ಪನಯನಂ ತಥಾ**'. ಉಪನಯನವೆಂದರೂ ಉಪರಿ ನಯನ. ಆಧ್ಯಾತ್ಮದ ಎತ್ತರಕ್ಕೆ ಎತ್ತುವ ಸಂಸ್ಕಾರ. ಸ್ತ್ರೀಯರಿಗೆ ವೈದಿಕಕರ್ಮಗಳಲ್ಲಿ ಸಹಧರ್ಮಾಧಿಕಾರವನ್ನು ಉಂಟುಮಾಡಿಸುವ ವಿವಾಹವು 'ಉದ್ವಾಹ'ವೆನಿಸಿದೆ.

ಸ್ತ್ರೀಯರಿಗೆ ಇದು ಉದ್ವಾಹವಾದರೆ, ಪುರುಷರಿಗೆ ವಿವಾಹ. '**ಸ್ತ್ರೀರತ್ನಂ ದುಷ್ಕುಲಾದಪಿ**' ಎಂಬ ಮಾತಿದೆ. ನೀಚಕುಲದಿಂದಾದರೂ ಒಳ್ಳೆಯ ಕನ್ಯೆಯನ್ನು ಸ್ವೀಕರಿಸಿ ವಿವಾಹವಾಗಬೇಕೆಂದಿದೆ. ಮದುವೆಯಾದ ಮೇಲೆ ಆಕೆ ತಂದೆಯ ಕುಲವನ್ನು ಬಿಟ್ಟು ಗಂಡನ ಕುಲಕ್ಕೆ ಸೇರುವುದರಿಂದ ಇದು 'ಉತ್ ವಹತಿ ಉಪರಿ ನಯತಿ ಕನ್ಯಾಂ ಯಸ್ಮಿನ್ ಸಂಸ್ಕಾರೇ ಸಃ ಉದ್ವಾಹಃ' ಹೀಗೆ ಅನ್ವರ್ಥ. ಅಪತ್ನೀಕನು ಅಯಜ್ಞ. ಯಜ್ಞಾಧಿ-ಕಾರವನ್ನು ದಯಪಾಲಿಸಿ ಎತ್ತರಿಸುವ ಈ ಸಂಸ್ಕಾರವು ವರನಿಗೂ ಉದ್ವಾಹ.

ಅಪತ್ನೀಕನಿಗೆ ಯಜ್ಞಾಧಿಕಾರವಿಲ್ಲ. ಪತ್ನಿಯನ್ನು ಸ್ವೀಕರಿಸುವ ಮೂಲಕ ಈರ್ವರೂ ಯಜ್ಞಾಧಿಕಾರ ಪಡೆಯುತ್ತಾರೆ. ಯಜ್ಞಸಂಯೋಗವಿರುವುದರಿಂದಲೇ ಆಕೆ ಪತ್ನಿ ಎನಿಸಿದ್ದಾಳೆ. '**ಪತ್ಯುರ್ನೋ ಯಜ್ಞಸಂಯೋಗೇ**' ಎಂಬ ಸೂತ್ರದಲ್ಲಿ ಪಾಣಿನಿ ಇದನ್ನೇ ಅಭಿಪ್ರಾಯ ಪಟ್ಟಿದ್ದಾನೆ. ಹೀಗೆ ಪತಿ-ಪತ್ನಿಭಾವದ ಮೂಲಕ ಯಜ್ಞಾಧಿಕಾರದಂತಹ ಉನ್ನತಸ್ಥಾನಕ್ಕೆ ಒಯ್ಯುವ ಈ ಸಂಸ್ಕಾರ 'ಉದ್ವಾಹ' ಎಂದು ಅನ್ವರ್ಥವಾಗಿ ಕರೆಸಿ-ಕೊಂಡಿದೆ.

ವಿವಾಹ ಸ್ತ್ರೀಸಂಸ್ಕಾರ. ಉದ್ವಾಹ ಉಭಯಸಂಸ್ಕಾರ. ಹಾಗಾಗಿಯೇ ಮನು, ಯಾಜ್ಞವಲ್ಕ್ಯ ಮುಂತಾದ ಸ್ಮೃತಿಕಾರರಿಗೆ ವಿವಾಹಶಬ್ದಕ್ಕಿಂತ 'ಉದ್ವಾಹ'ಶಬ್ದವೇ ಹೆಚ್ಚು ಇಷ್ಟ. ಅವರು 'ಉದ್ವಹೇತ ದ್ವಿಜೋ ಭಾರ್ಯಾಂ' 'ಸ್ತ್ರಿಯಮುದ್ವಹೇತ್' ಎಂದೇ ಎಲ್ಲೆಲ್ಲೂ ಬಳಸುತ್ತಾರೆ. 'ವಿವಹೇತ' ಎಂಬ ಬಳಕೆಯಿಲ್ಲ.

ಕನ್ಯಾದಾನವಾದ ಮೇಲೆ ವರ ವಧುವಿನ ಕೈಯ್ಯನ್ನು '**ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮ್**' ಎನ್ನುತ್ತಾ ಹಿಡಿದೆಬ್ಬಿಸುತ್ತಾನೆ. ಪಾಣಿಯನ್ನು ಗ್ರಹಣಮಾಡುವ ಈ ಮಹತ್ತ್ವೋಪೇತ ಅಂಗದ ನಿಮಿತ್ತದಿಂದ ಇಡೀ ವಿವಾಹಪದ್ಧತಿಗೆ '**ಪಾಣಿಗ್ರಹಣ**' ಎಂಬ ಹೆಸರು ಬಂದಿದೆ.

ಪ್ರಾದೇಶಿಕವಾಗಿ ವಿವಾಹವನ್ನು **ಧಾರೆ (ದಾರೆ)** ಎಂದೂ ಕರೆಯುತ್ತಾರೆ. ಧಾರೆ ಸ್ವೀಕರಿಸುವುದು, ಧಾರೆಯಿತ್ತು ಕೊಡುವುದು ಎಂಬ ಮಾತೂ ಇದೆ. ದಾನ ಕೊಡುವಾಗ ಜಲಧಾರೆಯಿತ್ತು ಕೊಡುವುದು ವಿಧಿ. ಅಲ್ಲದೇ ಶಿರೋಧಾರೆ, ಅಕ್ಕಿಧಾರೆಯೆಂಬ ಪ್ರಕ್ರಿಯೆಯೂ ವಿವಾಹದಲ್ಲಿದೆ. ಈ ಕಾರಣದಿಂದ ವಿವಾಹಕ್ಕೆ **ಧಾರೆ** ಎಂಬ ಹೆಸರೂ ಚಾಲ್ತಿಯಲ್ಲಿರುತ್ತದೆ.

ವರನು ನಡೆಸುವ ಪ್ರಕ್ರಿಯೆ ಪಾಣಿಗ್ರಹಣ, ಮಾಂಗಲ್ಯಬಂಧನ. ವಧು ತುಳಿಯುವುದು ಸಪ್ತಪದಿ. ಈರ್ವರೂ ಮಾಡುವಂತಹದು ಪರಿಣಯನ, ಲಾಜಹೋಮಗಳು. ಬಂಧುಗಳು ನಡೆಸುವುದು ಕನ್ಯಾವರಣ. ಕನ್ಯಾಪಿತೃವಿನಿಂದ ಮೊದಲು ವಾಗ್ದಾನ, ನಂತರ ಕನ್ಯಾದಾನ. ವರಪಿತೃವಿನಿಂದ ನಡೆದದ್ದು ಜಲಧಾರೆಯ ಮೂಲಕ ದಾನವಿತ್ತ ಕನ್ಯೆಯ ಧಾರಾಸ್ವೀಕಾರ ಹಾಗೂ ಮನೆತುಂಬಿಸಿಕೊಳ್ಳುವಿಕೆ (ವೇಶ್ಮಪೂರಣ). ಈ ಮದುವೆಯಿಂದ ಉಂಟಾದುದು ವರನಿಗೆ ವಿವಾಹ, ವಧುವಿಗೆ ಉದ್ವಾಹ.

## ಮದುವೆ

ಕನ್ನಡದಲ್ಲಿ 'ಮದುವೆ' ಎಂಬ ಪದದ ಮೂಲವೇನು? ತಲೆ ಕೆಡಸಿಕೊಂಡರೂ ಅರ್ಥವಾಗದಾದಾಗ ಒಬ್ಬನೆಂದ - 'ಮಗಳಿಗಾಗಿ 'ಮಾಡುವ' ದುಂದು-ವೆಚ್ಚ ಎಂಬ ಶಬ್ದಗಳ ಆದ್ಯಕ್ಷರಗಳನ್ನು ಜೋಡಿಸಿ ಮದುವೆ ಎಂಬ ಶಬ್ದ ಅರ್ಥಗರ್ಭಿತವಾಗಿದೆ' ಎಂದು. ಇನ್ನೊಬ್ಬ ಹಾಸ್ಯಪ್ರಿಯ ಹೀಗೆಂದ - 'ಆರಂಭದಲ್ಲಿ ವಧೂವರರಿಗೆ ಮಧು(ಜೇನಿ)ವಿನಂತೆ ಸಿಹಿಯಾಗಿದ್ದು, ಅನಂತರದಲ್ಲಿ 'ವ್ಹೇ' ಎಂಬ ಧ್ವನಿಯಲ್ಲಿ ತೋರುವ ಹೇಸಿಗೆಯನ್ನೂ, ವೈರಾಗ್ಯವನ್ನೂ ಉಂಟುಮಾಡುವಂಥದ್ದು ಮಧುವ್ಹೆ. ಮಧುವ್ಹೆಯೇ ಮದುವೆಯಾಗಿದೆ' ಎಂದು. ಮತ್ತೊಬ್ಬನ ಪ್ರಕಾರ - 'ಮ ಎಂದರೆ ಮನೆ, ಮಗಳು. ದು ಎಂದರೆ ದುಡ್ಡು. ವೆ ಎಂದರೆ ವೆಚ್ಚಮಾಡಿ ಕಳೆದುಕೊಳ್ಳುವುದು. ಮಗಳನ್ನಲ್ಲದೆ ಮನೆ, ದುಡ್ಡು, ಬಂಗಾರಗಳನ್ನೂ ಕಳೆದುಕೊಳ್ಳುವ ಭಯಾನಕ ಕ್ರಿಯೆಯೇ ಮದುವೆ'.

ಕೆಲವೆಡೆ ನಡೆಯುವ ಅನರ್ಥಗಳನ್ನು ಗಮನಿಸಿದರೆ ಇವರು ಹೇಳಿದ ಅರ್ಥವೇನೂ ತೀರಾ ತಪ್ಪಲ್ಲ. ಆದರೂ ಇದು ಹಾಸ್ಯಕ್ಕಾಗಿ ಹೊಂದಿಸಿದ ಅರ್ಥ. ನಿಜವಾದ ಅರ್ಥವೇನು?

'ಮದಿಮೆ ಒಂಜಿ ದ್ರುಪದರಾಜ ಮಂದಿರೊಂಟು ಬೂಂದಿಲಾಡ್ ಚಿರೋಟಿ ಪೇಣಿ ರಾಶಿರಾಶಿ' ಎಂದು ಶ್ರೀವಾದಿರಾಜರು ತುಳುವಿನಲ್ಲಿ ದ್ರೌಪದೀವಿವಾಹದ ಬಗೆಗೆ ಹಾಡಿದ್ದಾರೆ. ಕನ್ನಡದ ಮದುವೆ ತುಳುವಿನ 'ಮದಿಮೆ' ಆಗಿದೆ. ಮದಿಮಾಯೆ, ಮದಿಮಾಳ್ ಎಂಬ ಶಬ್ದಗಳು ಮದುಮಗ, ಮದುಮಗಳು ಎಂಬರ್ಥದಲ್ಲಿ ತುಳುವಿನಲ್ಲಿದೆ. ಉಪನಯನವನ್ನು 'ನೂಲಮದುವೆ' ಎನ್ನುವುದಿದೆ. ತುಳುವಿನಲ್ಲಿ 'ನೂಲಮದಿಮೆ' ಎಂಬ ಬಳಕೆಯಿದೆ. ಹಾಗಾದರೆ ವಧೂವರರಿಗೆ ಸಂಬಂಧಿಸಿದ

ಕೆಲಸವಷ್ಟೇ ಮದುವೆಯಲ್ಲ. ಹೊಸದಾದ ದೀಕ್ಷೆಯೆಲ್ಲವೂ ಮದುವೆಯೆನಿಸುವುದು. ಹಾಗಾಗಿ ಮದುವೆಯೆಂಬುದು ಸಡಗರದ ದೀಕ್ಷೆ ಎಂಬ ಅರ್ಥದ ಅಚ್ಚಕನ್ನಡ ಶಬ್ದವಿರಬೇಕು. ಇಲ್ಲವೇ ಮಧುಪರ್ಕ, ಮಧುಚಂದ್ರ ಎಂಬಲ್ಲಿರುವ ಮಧುಶಬ್ದದಿಂದ ನಿಷ್ಪನ್ನವಾಗಿರಬೇಕು.

## ಬ್ರಾಹ್ಮವಿವಾಹ

ವಿವಾಹವು ಅಷ್ಟವಿಧ. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ. ಹೆಸರೇ ಸೂಚಿಸುವಂತೆ ಆರಂಭದ ನಾಲ್ಕು ವಿಧದ ವಿವಾಹವಷ್ಟೇ ಉಚಿತ. ಅದರಲ್ಲೂ ಬ್ರಾಹ್ಮವಿವಾಹವಿಧಿ ಸಕಲವೈದಿಕಮಂತ್ರಗಳ ಆರ್ಷಪರಂಪರೆಯನ್ನು ಹೊಂದಿದೆ. ಹಾಗಾಗಿ ಇಂದಿಗೂ ವಿಪ್ರಸಮುದಾಯದಲ್ಲಿ ಬ್ರಾಹ್ಮವಿವಾಹಪದ್ಧತಿಯೇ ಚಾಲ್ತಿಯಲ್ಲಿದೆ. 'ಬ್ರಾಹ್ಮವಿವಾಹವಿಧಿಯಿಂದ ಈ ಕನ್ಯೆಯನ್ನು ದಾನ ಮಾಡುತ್ತೇನೆ' **(ಬ್ರಾಹ್ಮೇಣ ವಿವಾಹೇನ ಇಮಾಂ ಕನ್ಯಾಂ ಸಂಪ್ರದದೇ)** ಎಂಬ ಮಾತನ್ನು ವಾಗ್ದಾನವಾಗಿ ಹೊತ್ತು ಕನ್ಯಾದಾತೃ ಹೇಳುತ್ತಾನೆ.

ಸದಾಚಾರನಿಷ್ಠ ವಿದ್ಯಾವಂತ ವರನನ್ನು ಕರೆದು, ಪೂಜಿಸಿ, ಆತನಲ್ಲಿ ನಾರಾಯಣನನ್ನು ಚಿಂತಿಸಿ, ಪಾದ ತೊಳೆದು, ಶ್ರೀರೂಪಿಣಿಯಾದ ಸ್ವಸುತೆಯನ್ನು ದಾನ ನೀಡುವಿಕೆಯು **ಬ್ರಾಹ್ಮವಿವಾಹ.** ಆಪಸ್ತಂಬರು ಒಂದು ಅಂಶ ಸೇರಿಸಿದರು. **'ಶಕ್ತಿ-ವಿಷಯೇಣಾಲಂಕೃತ್ಯ'** ಎಂದು. ತನ್ನ ಶಕ್ತಿಗೆ ಅನುಗುಣವಾಗಿ ಅಲಂಕರಿಸಿ ದಾನವೀಯ-ಬೇಕು.

ಬ್ರಾಹ್ಮವಿವಾಹವು ವಧೂಗೃಹದಲ್ಲಿ ನಡೆಯುತ್ತದೆ. ವರ ತನ್ನವರೊಡನೆ ಅಲ್ಲಿ ಬಂದು ಪೂಜಿಸಲ್ಪಟ್ಟು, ಕನ್ಯೆಯನ್ನು ಸ್ವೀಕರಿಸುತ್ತಾನೆ. ವಿವಾಹದ ಉದ್ದೇಶ ಪ್ರಜಾಸಹತ್ವ ಕರ್ಮ. ಅಂದರೆ ಸತ್ಪ್ರಜೆಗಳನ್ನು ಪಡೆಯುವುದು ಮತ್ತು ಗಾರ್ಹಸ್ಥ್ಯಕರ್ಮಗಳಿಗೆ ಪರಸ್ಪರ ಸಹಕರಿಸುತ್ತಾ ಜೊತೆಗೆ ಕರ್ಮನಿರ್ವಾಹ ಮಾಡುವುದು. ಹೀಗೆ ಯಜ್ಞಾದಿ ಗಾರ್ಹಸ್ಥ್ಯಕರ್ಮದಿಂದ ದೇವಋಣವನ್ನೂ, ಸತ್ಸಂತತಿಯ ಮೂಲಕ ಪಿತೃಋಣವನ್ನೂ ಪರಿಹರಿಸುವುದಕ್ಕಾಗಿ ಈ ವಿವಾಹ. ಬ್ರಹ್ಮನಿಂದ ದೃಷ್ಟವಾದ ಹೆಚ್ಚುಗಾರಿಕೆಯ ವಿವಾಹ-ವಾದ್ದರಿಂದ ಇದಕ್ಕೆ ಬ್ರಾಹ್ಮವೆಂದು ಹೆಸರು.

ಬ್ರಾಹ್ಮವಿವಾಹವಿಧಿಯಿಂದ **ಊಢಳಾದ** ವಧುವಿನಲ್ಲಿ ಜನಿಸಿದ ಮಗನಿಂದ 21ತಲೆಮಾರಿನ ಉದ್ಧಾರವಿದೆ. ತನ್ನನ್ನೂ, ತನ್ನ ಮೇಲಿನ ಹತ್ತು ತಲೆಮಾರನ್ನೂ, ತನ್ನ ನಂತರ ಹುಟ್ಟುವ ಹತ್ತು ತಲೆಮಾರನ್ನೂ ಹೀಗೆ ಒಟ್ಟು 21ತಲೆಮಾರಿನ ಜನರನ್ನೂ ಈ

ಬ್ರಾಹ್ಮೀಪುತ್ರ ಪಾಪಗಳಿಂದ ಬಿಡಿಸಿ ಪಾವನರನ್ನಾಗಿಸುತ್ತಾನೆ. **'ದಶಪೂರ್ವಾನ್ ದಶಪರಾನ್ ಆತ್ಮಾನಂ ಚ ಬ್ರಾಹ್ಮೀಪುತ್ರಃ ಪುನಾತಿ'** ಎಂಬುದು ಗೌತಮರ ಮಾತು. ಶೌನಕರ ಪ್ರಕಾರ **'ದ್ವಾದಶಪೂರ್ವಾನ್ ದ್ವಾದಶಪರಾನ್'** ಎಂದಿದೆ. ಆದ್ದರಿಂದಲೇ ಕನ್ಯಾದಾನಸಂಕಲ್ಪದಲ್ಲಿ 'ದ್ವಾದಶಪೂರ್ವಾನ್ ದ್ವಾದಶಪರಾನ್ ಪವಿತ್ರೀಕರ್ತುಮಾ-ತ್ಮನಶ್ಚ' ಎಂಬ ಮಾತಿದೆ. ಇಪ್ಪತ್ತೈದು ತಲೆಮಾರನ್ನು ಪಾವನಗೊಳಿಸುವುದಕ್ಕಾಗಿ ಕನ್ಯಾದಾನ ಎಂದರ್ಥ.

ದೈವ, ಆರ್ಷ ವಿವಾಹಗಳು ಇಂದು ಚಾಲ್ತಿಯಲ್ಲಿಲ್ಲ.

ಕನ್ಯಾಪಿತೃವು ಅನುರೂಪನಾದ ವರನನ್ನು ಪೂಜಿಸಿ ಮಗಳನ್ನು ಕೊಡುವಾಗ ''ನಿಮ್ಮಿಬ್ಬರಲ್ಲಿ ಯಾರೊಬ್ಬರೂ ಇನ್ನೊಬ್ಬರಿಗೆ ತಿಳಿಯದಂತೆ ಯಾವ ವಿಧದ ಕರ್ಮವನ್ನೂ ನಡೆಸಬಾರದು, ಸಹಧರ್ಮವನ್ನಾಚರಿಸಬೇಕು, ಧರ್ಮಾರ್ಥಕಾಮಗಳಲ್ಲಿ ಮೀರಿ ನಡೆಯದಿರಿ'' ಎಂಬ ಕಟ್ಟುಪಾಡು ಮಾಡುತ್ತಾನೆ.

> **ಸಹೋಭೌ ಚರತಂ ಧರ್ಮಮಿತಿ ವಾಚಾನುಭಾಷ್ಯ ತು ।**
> **ಕನ್ಯಾಪ್ರದಾನಮಭ್ಯರ್ಚ್ಯ ಪ್ರಾಜಾಪತ್ಯೋ ವಿಧಿಃ ಸ್ಮೃತಃ ॥**

ಎಂದಿದೆ ಮನುಸ್ಮೃತಿ. ಇದು ಪ್ರಾಜಾಪತ್ಯವಿವಾಹ. ಈ ಕರಾರಿನಂತೆ ವರ ಎರಡನೇ ವಿವಾಹವಾಗುವಂತಿಲ್ಲ. ಆಗುವುದಿದ್ದರೂ ಪತ್ನಿಯ ಒಪ್ಪಿಗೆ ಅನಿವಾರ್ಯ.

ಇಂದು ನಮ್ಮಲ್ಲಿ ನಡೆಯುವ ವಿವಾಹಗಳಲ್ಲಿ ಬ್ರಾಹ್ಮ,ಪ್ರಾಜಾಪತ್ಯಗಳೆರಡರ ಅಂಶಗಳೂ ಸೇರಿವೆ. **'ಧರ್ಮೇ ಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಮ್'** **'ಸಹಧರ್ಮಶ್ಚರ್ಯತಾಮ್'** ಎಂಬ ಎರಡು ಉಪದೇಶಮಾತುಗಳನ್ನು ಕನ್ಯಾಪಿತೃವು ಇಂದಿಗೂ ಹೇಳುತ್ತಾನೆ.

**'ನಾತಿಚರಾಮಿ' 'ಸಹಧರ್ಮಂ ಚರಿಷ್ಯಾಮಿ'** ಎಂಬ ಅಂಗೀಕಾರವಚನವನ್ನೂ ವರನು ಹೇಳುತ್ತಾನೆ.

ಮುಂದಿನ ಆಸುರ ಮೊದಲಾದ ನಾಲ್ಕುಬಗೆಯ ವಿವಾಹಗಳು ಸಾತ್ವಿಕವಲ್ಲ. ಹಾಗಾಗಿ ಅದರ ಬಗೆಗೆ ಕಾಳಜಿ ಬೇಡ. ಆದರೂ ಅವುಗಳಲ್ಲಿ ಒಂದಾದ ಗಾಂಧರ್ವ ವಿವಾಹ ಇಂದಿನ ಕಾಲದಲ್ಲಿ ಅನಿರ್ಬಂಧಿತವಾಗಿ ನಡೆಯುತ್ತಿದೆ.

## ಗಾಂಧರ್ವವಿವಾಹ

ಗಾಂಧರ್ವವಿವಾಹವೆಂದರೆ ಸ್ವಯಂವರ. ವಯಸ್ಸಿಗೆ ಬಂದ ಯುವಕ

ಯುವತಿಯರು ಪರಸ್ಪರ ಆಕರ್ಷಣೆಯಿಂದ ಪ್ರೀತಿಸಿ, ಪ್ರೀತಿಯ ಹುಚ್ಚಿನಿಂದ ಮೈಮರೆತು ಸ್ವೇಚ್ಛೆಯಿಂದ ಮದುವೆಯಾಗುವುದು **ಗಾಂಧರ್ವ.**

ಮನುವಿನ ಪ್ರಕಾರ ಪ್ರೀತಿಯ ಸೆಳೆತದಿಂದಲ್ಲ ಕಾಮದ ಬಂಧದಿಂದ ಪರಸ್ಪರರು ಒಪ್ಪಿ ಪರಸ್ಪರ ಸೇರಿ ಒಂದಾಗುವುದು ಗಾಂಧರ್ವ. '**ಗಾಂಧರ್ವಃ ಸ ತು ವಿಜ್ಞೇಯಃ ಮೈಥುನ್ಯಃ ಕಾಮಸಂಭವಃ**'.

ಈ ಗಾಂಧರ್ವವು ಬ್ರಾಹ್ಮಣನಿಗೆ ನಿಷಿದ್ಧ.

ನವಯೌವ್ವನಸಂಪನ್ನರು ಜವ್ವನೆಯರ ಜೊತೆಗೆ ಒಂದೇ ಶಾಲೆ- ಕಛೇರಿಗಳಲ್ಲಿ ಬೆರೆಯುವ ಇಂದಿನ ವಾತಾವರಣದಲ್ಲಿ ಗಾಂಧರ್ವಕ್ಕೆ ವಿಪುಲಾವಕಾಶವಿದೆ. ಇಲ್ಲಿ ಜಾತಿ, ಧರ್ಮ, ಅಂತಸ್ತುಗಳ ಭೇದವಿಲ್ಲದೆ ಇಬ್ಬರಲ್ಲಿ ಕಾಮ ಅಥವಾ ಪ್ರೇಮ ಅಂಕುರಿಸುತ್ತದೆ. 'ಮೈಥುನ್ಯಃ ಕಾಮಸಂಭವಃ' ಎಂದಂತೆ ಸೇರುವಿಕೆಯಲ್ಲಿ ಪರ್ಯವಸಾನಗೊಳ್ಳುತ್ತದೆ. ಕೆಲವೊಮ್ಮೆ ತಾತ್ಕಾಲಿಕ ಇಂದ್ರಿಯಚಾಪಲ್ಯದ ಪರಿಣಾಮದಿಂದ ಜೀವನಪೂರ್ತಿ ದುಃಖ ದುಮ್ಮಾನದ ಜೀವನ ಎದುರಾಗಿ ಬಿಡುತ್ತದೆ.

'**ಕಾಮಾರ್ತಾ ಹಿ ಪ್ರಕೃತಿಕೃಪಣಾ ಚೇತನಾಚೇತನೇಷು**' ಎಂಬುದು ಕವಿವಾಣಿ. ಕಾಮಾರ್ತರಿಗೆ ವಿವೇಕವಿರುವುದಿಲ್ಲ. ಕಾಮಪೀಡೆಯ ಪರಾಕಾಷ್ಠೆಯಲ್ಲಿ ಚೇತನ ಯಾವುದು, ಅಚೇತನ ಯಾವುದು ಎಂಬುದನ್ನೂ ಅರಿಯರು ಕಾಮಾರ್ತರು.

ಪ್ರೌಢೆಯರು ಇಂತಹ ಕಾಮಪಾಶಕ್ಕೆ ಸಿಲುಕಿ ವರಿಸುವಾಗ ತಮ್ಮ ವಿದ್ಯೆ , ಅಂತಸ್ತು, ಮನೆತನ, ವರ್ಣ, ಆಚಾರ, ನಮ್ಮ ತಂದೆತಾಯಿಯರ ಆಚಾರವಿಚಾರಗಳಿಗೆ ನನ್ನ ಈ ಪ್ರಿಯಕರ ಸದೃಶನೇ? ಎಂಬುದನ್ನು ವಿವೇಚಿಸುವುದಿಲ್ಲ. ಅಂತಹ ವಿವೇಕವನ್ನು ಕಾಮಪೂರವು ಕೊಚ್ಚಿ ಬಿಟ್ಟಿರುತ್ತದೆ. ತನ್ನ ವಿದ್ಯೆ ಆಚಾರಾದಿಗಳಿಗೆ ಸದೃಶನಲ್ಲದ ವ್ಯಕ್ತಿಯನ್ನು ಸ್ವೇಚ್ಛೆಯಿಂದ ವಿವಾಹವಾಗಿ ಬಿಡುತ್ತಾಳೆ. ತತ್ಕಾಲದ ಇಂದ್ರಿಯತೃಪ್ತಿಯ ಲಾಭದಿಂದ ಹುಚ್ಚೆದ್ದು ತಾನು ಮಾಡಿದ ಘನಸಾಧನೆಯ ಬಗ್ಗೆ ಇತರರಲ್ಲಿ ಬಡಾಯಿ ಬಿಗಿಯುತ್ತಾಳೆ. ಕಾಲ ಕಳೆಯುತ್ತದೆ. ತನ್ನ ಗಂಡನ ಮನೆತನ, ನಡವಳಿಕೆಗಳು ತನ್ನ ಸ್ವಭಾವಕ್ಕೆ ಹೊಂದಿಕೊಳ್ಳುತ್ತಿಲ್ಲ ಎಂಬುದು ಅರಿವಾಗತೊಡಗುತ್ತದೆ. ವೈಮನಸ್ಯಪಿಶಾಚಿ ಆವರಿಸತೊಡಗುತ್ತದೆ. ಮನಸ್ಸಿನಲ್ಲಿದ್ದ ಭಾವಗಳು ಬಾಯಿಗೆ ಬಂದಾಗ ಅಶಾಂತಿ ಆವರಿಸಿ ಬಿಡುತ್ತದೆ. ಹಿರಿಯರ ಮೂಲಕ ಪರಿಹಾರೋಪಾಯಕ್ಕೆ ಹೆಣಗುವಂತಿಲ್ಲ. ಹಿರಿಯರನ್ನು ತುಚ್ಛೀಕರಿಸಿ ನಡೆದ ಸ್ವೇಚ್ಛೆಯ ವಿವಾಹವಿದು. ಇಂತಹ ಗಾಂಧರ್ವ ದಂಪತಿಗಳು ಅನೇಕರು ತಮ್ಮ ತೊಳಲಾಟವನ್ನು ಸ್ವಯಂಕೃತಾಪರಾಧವಾದ್ದರಿಂದ ಅನ್ಯರಲ್ಲಿ ಹೇಳಲೂ

ಆಗದೆ ತಾವೊಬ್ಬರೇ ಬೇಯಲಾರದೆ ನುಂಗಲಾರದ ತುತ್ತಿನ ಸಂಸಾರದಲ್ಲಿ ಬಿದ್ದಿದ್ದಾರೆ. ಇವರ ಕಷ್ಟ ಗೊತ್ತಾಗುವುದು ಜ್ಯೋತಿಷ್ಕರು ಮತ್ತು ಪುರೋಹಿತರಿಗೆ ಮಾತ್ರ. ಒಂದೊಮ್ಮೆ ಮಾನಸತಜ್ಞವೈದ್ಯರಲ್ಲಿ ಇವರು ದುಃಖವನ್ನು ತೋಡಿಕೊಳ್ಳುವ ಸ್ಥಿತಿಯೂ ಬರುತ್ತದೆ.

ಹಿರಿಯರೇ ನೋಡಿ ಸರ್ವರೂ ಒಪ್ಪಿ ಮದುವೆಯಾದಲ್ಲಿ ಈ ರೀತಿಯ ವೈಮನಸ್ಯ ಬರುವುದಿಲ್ಲವೆಂದಿಲ್ಲ. ಆದರೆ ಅಲ್ಲಿ ಮದುವೆ ಮಾಡಿಕೊಟ್ಟವರಿಗೆ ಒಂದು ಬಾಧ್ಯತೆ ಇದೆ. ಈ ದಂಪತಿಗಳಲ್ಲಿ ವಿರಸವುಂಟಾದರೆ ಇಬ್ಬರ ಮಾತಾಪಿತೃಗಳು ಸರಿಯಾದ ರೀತಿಯಿಂದ ಬುದ್ಧಿವಾದ ಹೇಳಿ ವೈಮನಸ್ಯವನ್ನು ಕಿತ್ತು ದಾಂಪತ್ಯವನ್ನು ಸರಿಪಡಿಸಬಹುದು. ಹಿರಿಯರ್‍ಯಾರನ್ನೂ ಕೇಳದೇ ಮದುವೆಯಾದವರಿಗೆ ತಮ್ಮ ದುಃಖ, ವೈಮನಸ್ಯಗಳನ್ನು ಬೇರೆಯವರಲ್ಲಿ ಹೇಳಿಕೊಳ್ಳುವ ಧೈರ್ಯ ಇರುವುದಿಲ್ಲ. ಅವರಿಗೆ ಬುದ್ಧಿವಾದ ಹೇಳುವ ಮನಃಸ್ಥಿತಿ ಆ ಮಾತಾಪಿತೃಗಳಿಗೂ ಇರುವುದಿಲ್ಲ. ದುಃಷ್ಯಂತ ಶಕುಂತಲೆಯನ್ನು ಗಾಂಧರ್ವವಿಧಿಯಿಂದ ಮದುವೆಯಾಗಿದ್ದರೂ ತಿಳಿಯದೆಂಬಂತೆ ತಿರಸ್ಕರಿಸಿದ. ಸಾಧ್ವಿ ಶಕುಂತಲೆ ದೈನ್ಯಸ್ಥಿತಿಯಲ್ಲಿ ಕಣ್ಣೀರಿನಿಂದ ತೊಯ್ದಳು. ಭಯದಿಂದ ಬೆದರಿದಳು. ಆಗ ಆಶ್ರಮಜ್ಯೇಷ್ಠೆಯಾದ ಗೌತಮಿಯು ಹೇಳಿದ ಮಾತೇನು?

ನ ಮೇ ವಚನಾವಸರೋऽಸ್ತಿ ಕಥಮಿತಿ ನಾಪೇಕ್ಷಿತೋ ಗುರುಜನೋऽನಯಾ ನ ಖಲು ಪೃಷ್ಟಶ್ಚ ಬಂಧುಜನಃ । ಪರಸ್ಪರಸ್ಮಿನ್ನೇವ ಚರಿತೇ ಭಣಾಮಿ ಕಿಮೇಕೈಕಮ್ ॥ **(ಶಾಕುಂತಲ)** ''ನಾನೇಕೆ ಇಲ್ಲಿ ಬಾಯಿ ತೂರಿಸಲಿ? ನಮ್ಮನ್ನೇನು ಕೇಳಿ ಮದುವೆ-ಯಾದವಳಲ್ಲ ನೀನು. ನಿಮ್ಮ ಮದುವೆಯಲ್ಲಿ ನಮ್ಮದೇನೂ ಪಾತ್ರವಿಲ್ಲದಿರುವಾಗ ನಿಮ್ಮಿಬ್ಬರಿಗೆ ಮಾತ್ರ ಸಂಬಂಧಿಸಿದ ಈ ನಡೆವಳಿಯಲ್ಲಿ ನಮ್ಮದೇನು ಕೆಲಸ? ನಮ್ಮ ಮಾತಿಗೆ ಅವಕಾಶವಾದರೂ ಎಲ್ಲಿದೆ!!''

ಗೌತಮಿಯ ಮಾತು ಸಮಯೋಚಿತ. ಗಾಂಧರ್ವದ ಕಬಂಧಬಾಹುವಿಗೆ ಸಿಲುಕಿ-ದವರು ಯೋಚಿಸಬೇಕಾದುದು.

ಗಾಂಧರ್ವದ ಅನಾಹುತ ಇಷ್ಟರಲ್ಲೇ ಮುಗಿಯುವುದಿಲ್ಲ. ಅದು ಸಂತಾನದಲ್ಲೂ ಕಾಣಿಸಿಕೊಂಡು ಶಿಕ್ಷೆಯನ್ನು ದೀರ್ಘಾವಧಿಗೊಳಿಸುತ್ತದೆ. ಕೇವಲ ಕಾಮದ ಕೂಡಾಟ-ದಿಂದ ಜನಿಸಿದ ಶಿಶುಗಳಿಗೆ ಸದ್ಬುದ್ಧಿ, ಸದ್ವಿದ್ಯೆಗಳು ತುಂಬುವುದು ವಿರಳ. ಅನ್ಯವರ್ಣದ ಗಾಂಧರ್ವದಿಂದ ಜನಿಸಿದ ಮಕ್ಕಳ ದುರವಸ್ಥೆ ಯಾರಿಗೂ ಬೇಡ. ಆ ಮಕ್ಕಳು ಕೌಟುಂಬಿಕಬಂಧದಿಂದ ಅಜ್ಜ ಅಜ್ಜಿಯರ ಪ್ರೀತಿಯಿಂದ ವಂಚಿತರಾಗುತ್ತಾರೆ.

ತಂದೆತಾಯಿಯರ ಅಪರಾಧದ ಕಠಿಣಶಿಕ್ಷೆಯನ್ನು ಈ ನಿರಪರಾಧಿಮಕ್ಕಳು ಅನು-ಭವಿಸಬೇಕಿದೆ!!

ಇವಕ್ಕೆಲ್ಲಾ ಪರಿಹಾರವನ್ನು ಯೋಚಿಸಿದ ಸ್ಮೃತಿಕಾರರು ಬಾಲ್ಯದಲ್ಲೇ ವಿವಾಹ ಮಾಡುವ ಪದ್ಧತಿಯನ್ನು ಜಾರಿಗೆ ತಂದರು. ಮಗನ ಉಪನಯನದ ವಯಸ್ಸೇ ಮಗಳ ವಿವಾಹದ ವಯಸ್ಸು. ಜನ್ಮಾಷ್ಟಮದಲ್ಲಿ ಮದುವೆ. **'ಅಷ್ಟವರ್ಷಾ ತ್ವಿಯಂ ಕನ್ಯಾ'** ಎಂಬ ಮಂತ್ರ ಇಂದಿಗೂ ವಿವಾಹದ ಪದ್ಧತಿಯಲ್ಲಿ ಉಚ್ಚರಿಸಲ್ಪಡುತ್ತದೆ. ಅಷ್ಟವರ್ಷವು ಎಷ್ಟೆಷ್ಟೋ ವರ್ಷಗಳಾಗಿಬಿಟ್ಟಿವೆ. ಅಷ್ಟೇ!

ವಧೂವರರ ತಂದೆತಾಯಂದಿರೇ ಪರಸ್ಪರ ಸಮಾನತೆ ಹೊಂದಾಣಿಕೆಯನ್ನು ಗಮನಿಸಿ ಮದುವೆಯನ್ನು ನಿಶ್ಚಯಿಸುತ್ತಾರೆ. ವರ ಅಷ್ಟವರ್ಷದ ಕನ್ನಿಕೆಗೆ ಮಾಂಗಲ್ಯ ತಾಳಿ ಕಟ್ಟುತ್ತಾನೆ. ಆಮೇಲೆ ತಾನು ಬ್ರಹ್ಮಚರ್ಯದಿಂದಿದ್ದು ವಿದ್ಯಾಭ್ಯಾಸ ಮುಗಿಸುತ್ತಾನೆ. ಸಮಾವರ್ತನೆಯಾದ ಮೇಲೆ ತಾನು ಬಾಲ್ಯದಲ್ಲಿ ವಿವಾಹವಾಗಿದ್ದ ಕನ್ಯೆಯನ್ನು ಕನ್ಯಾಪಿತೃ ದಾನವಿತ್ತಮೇಲೆ ವಿವಾಹವಾಗಿ ಸಪ್ತಪದೀ ನೆರವೇರಿಸಿ ನೆಮ್ಮದಿಯ ಗಾರ್ಹಸ್ಥ್ಯ ನಡೆಸುತ್ತಾನೆ.

ವರನು ಮಾಂಗಲ್ಯಬಂಧನ ಮಾಡಿದ ನಂತರ ಮುಂದೆ ವಿವಾಹದ ಮುನ್ನ ಅಂತರಕಾಲದಲ್ಲಿ ಕನ್ಯೆಯ ಮನೆಯಲ್ಲಿ ಆಕೆಯ ಭಾವಿಪತಿಯ ವೃತ್ತಿಪ್ರವೃತ್ತಿಗಳಿಗೆ ಅನುಕೂಲವಾದ ವಿದ್ಯೆ-ಶಿಕ್ಷಣಗಳು ಲಭಿಸುತ್ತವೆ. ಭಾವಿಪತಿಯ ಬಗ್ಗೆ ಆಗಾಗ ಬರುವ ಮಾತುಗಳಿಂದ ಆಕೆಗೆ ಅಲ್ಲಿ ಪ್ರೇಮಾಂಕುರವಾಗುವ ವಾತಾವರಣಕ್ಕೆ ಅವಕಾಶವಿದೆ. ಪಾತಿವ್ರತ್ಯಧರ್ಮದ ಬೋಧೆ, ಅದರಲ್ಲಿರುವ ಸುಖಸಂತೋಷ, ಅದಕ್ಕೆ ವಿರುದ್ಧವಾದ ಅಧರ್ಮದಿಂದುಂಟಾಗುವ ದುಷ್ಫಲಗಳ ಬೋಧೆಯಿಂದ ಆಕೆ ಸುಚರಿತ್ರಳೂ ಕುಲೀ-ನೆಯೂ ಅನುಕೂಲಳೂ ಆದ ಪತ್ನಿಯಾಗಿ ಬದುಕಿ ಐಹಿಕ-ಪಾರತ್ರಿಕ ಸುಖಭೋಗಗಳಿಗೆ ಭಾಜನಳಾಗುತ್ತಾಳೆ. ಸತ್ಪ್ರಜೆಗಳನ್ನು ಪಡೆದು ಪಾಲಿಸಿ ಲೋಕವನ್ನೇ ಕಾಪಾಡುವ ತಾಯಿಯಾಗಿ ಬದುಕುತ್ತಾಳೆ.

ಕ್ರಾಂತದರ್ಶಿಗಳ ಈ ಚಿಂತನೆ ಲೋಕದಲ್ಲಿ ಬೇರೂರಿ ಅಂತೆಯೇ ಬಾಲ್ಯವಿವಾಹ ಬಹುಕಾಲ ನಡೆಯಿತು. ಆದರಲ್ಲೂ ಕೆಲವು ಲೋಪದೋಷಗಳು ತಲೆದೋರ-ತೊಡಗಿದವು. ತಾಳಿಕಟ್ಟಿದ ಹುಡುಗನೇ ಅಕಾಲಮೃತ್ಯುವಿಗೊಳಗಾದಾಗ ವಧುವಿನ ಗತಿಯೇನು? ವೈಧವ್ಯವೇ? ಆ ಬಾಲಕನಿಗೆ ಅವಘಡದಿಂದಾಗಿ ಅಂಗವೈಕಲ್ಯವೋ, ನಪುಂಸಕತ್ವವೋ, ಕುಷ್ಠಾಪಸ್ಮಾರಾದಿಗಳೋ ಉಂಟಾದಲ್ಲಿ ಈ ಹತ್ತುವರ್ಷದ ಕನ್ನಿಕೆ ಮುಂದೆ ಅವನೊಂದಿಗೆ ಜೀವನವನ್ನು ಕಳೆಯಬೇಕೇ? ಕನ್ಯಾಪಿತೃಗಳಿಗಾದರೂ ಅದು

ಋಷಿತರುವ ವಿಷಯವೇ? ಇಂತಹ ಹತ್ತಾರು ಪ್ರಶ್ನೆಗಳ ಮಧ್ಯದಲ್ಲಿ ಬಾಲ್ಯವಿವಾಹ ಸಮಾಜಬಹಿಷ್ಕೃತವಾಯಿತು. ''ಪ್ರೌಢೆಯಾಗುವುದಕ್ಕೆ ಮೊದಲೇ ವಿವಾಹವಾಗತಕ್ಕದ್ದು. ಮದುವೆಯಾಗದೇ ತಂದೆಯ ಮನೆಯಲ್ಲಿ ಯಾವ ಕನ್ಯೆ ರಜಸ್ವಲೆಯಾಗುತ್ತಾಳೋ ಅವಳು ವೃಷಲೀ. ಆ ಪ್ರೌಢೆಯನ್ನು ವಿವಾಹವಾದವನು ವೃಷಲೀಪತಿ'' ಎಂಬರ್ಥದ-

> **ಪಿತುರ್ಗೃಹೇ ತು ಯಾ ಕನ್ಯಾ ರಜಃ ಪಶ್ಯತ್ಯಸಂಸ್ಕೃತಾ ।**
> **ಸಾ ಕನ್ಯಾ ವೃಷಲೀ ಜ್ಞೇಯಾ ತತ್ಪತಿರ್ವೃಷಲೀಪತಿಃ ॥**

ಸ್ಮೃತಿಗೆ ಸಮಾಜ ಒತ್ತು ಕೊಡಲಿಲ್ಲ. ಪ್ರೌಢೆಯನ್ನೇ ವಿವಾಹವಾಗುತ್ತಾ ವೃಷಲೀ-ಪತಿತ್ವ ದೋಷನಿವೃತ್ತಿಗಾಗಿ ಕೂಷ್ಮಾಂಡಿಹೋಮವನ್ನು ಸಂಪ್ರದಾಯಸ್ಥ ನಡೆಸತೊಡಗಿದ.

ನಮ್ಮ ಇಂದಿನ ಸಂವಿಧಾನವೂ ಕೂಡ ಪ್ರೌಢವಿವಾಹವನ್ನೇ ಆದೇಶಿಸಿದೆ. ಆಧುನಿಕ ವಿದ್ಯಾಭ್ಯಾಸ ಮುಗಿಯುವಾಗಲೇ 22ವರ್ಷವಾಗಿರುತ್ತದೆ. ಆ ವಯಸ್ಸಿನಲ್ಲಿ 10ವರ್ಷದ ಕನ್ಯೆಯನ್ನು ಕೊಟ್ಟು ವಿವಾಹಮಾಡುವಲ್ಲಿ ವಯಸ್ಸಿನ ಅಂತರ ತೊಂದರೆಯಾಗುತ್ತದೆ. ಹಾಗಾಗಿ ಪ್ರೌಢವಿವಾಹ ಅನಿವಾರ್ಯ. ಆದ್ದರಿಂದಲೇ ''ಪ್ರೀತಿಸಿ ಅವನೊಡನೆ ಓಡಿಹೋಗುವುದು'' ಎಂಬ ಗಾಂಧರ್ವಪಿಡುಗು ಮತ್ತೆ ತಲೆದೋರಿದೆ. ''ಸುಭದ್ರೆ ಹಾಗೆ ಮಾಡಲಿಲ್ಲವೇ? ರುಕ್ಮಿಣಿ ಮತ್ತೇನು ಮಾಡಿದ್ದು?'' ಎಂಬ ಉತ್ತರವೂ ಹುಡುಗಿಯರಲ್ಲಿ ಸಿದ್ಧವಾಗಿರುತ್ತದೆ. ಅಂಥವರಿಗೊಂದು ಕಿವಿಮಾತು - ''ತಾವು ರುಕ್ಮಿಣೀಸುಭದ್ರೆಯರಂತೆ ಪರಸ್ಪರ ಪ್ರೀತಿಸಿ ವರಿಸುವುದೇ ಆದರೂ ಒಂದೇ ವರ್ಣದ, ವಿಭಿನ್ನಗೋತ್ರದ, ದುರಭ್ಯಾಸಗಳಿಲ್ಲದ, ತಮ್ಮ ಮನೆತನಕ್ಕೆ ಹೊಂದುವ, ಸದ್ಗುಣಿಯನ್ನೇ ವಿವೇಕದಿಂದ ಮೋಹಿಸಿ, ಪ್ರೀತಿಸಿ. ಇಂದ್ರಿಯನಿಗ್ರಹವಿರಲಿ. ಋಷಿಪ್ರೋಕ್ತಕ್ರಮದಿಂದ ಹೋಮ, ಸಪ್ತಪದಿಗಳಿಂದ ಸಂಸ್ಕಾರಗೊಂಡು ಗರ್ಭಾಧಾನಾದಿ ಸಂಸ್ಕಾರ ನಡೆಸಿ ಜೊತೆಯಾಗಿ ಬಾಳಿ. ಹೀಗಾದಲ್ಲಿ ದೋಷವಾಗದೆಂದು ಭಾವಿಸಬಹುದು''.

## ಎಂತಹ ಕನ್ಯೆಯನ್ನು ವರಿಸಬೇಕು?

**ಲ**ಕ್ಷಣಸಂಪನ್ನೆಯಾದ ಸವರ್ಣೆಯನ್ನು ವಿವಾಹವಾಗು. ಬ್ರಾಹ್ಮಣ ಬ್ರಾಹ್ಮಣ-ವರ್ಣದವಳನ್ನೇ ವಿವಾಹವಾಗಬೇಕು. (ಮನು)

**ತ**ನಗಿಂತ ಆಕೆಯ ವಯಸ್ಸು ಕಡಿಮೆ ಇರಬೇಕು. ಎಷ್ಟು ಕಡಿಮೆ? 'ಇಷ್ಟೇ' ಎಂಬ ವಿಧಿಯಿಲ್ಲ. ನಾಲ್ಕೈದು ವರ್ಷಗಳಾದಲ್ಲಿ ಉಚಿತ. ಒಂಭತ್ತುವರ್ಷ ವ್ಯತ್ಯಾಸವಿದ್ದರೂ ಪರವಾಗಿಲ್ಲ. (ಶೌನಕ)

**ಗೋ**ತ್ರ ಬೇರೆಯಾಗಿರಲಿ. ಭಾರ್ಗವ ಹಾಗೂ ಆಂಗೀರಸಗೋತ್ರಗಳಲ್ಲಿ ಸ-ಗೋತ್ರವಿವಾಹಕ್ಕೆ ಅವಕಾಶವಿದ್ದರೂ ಪ್ರವರದಲ್ಲಿ ವ್ಯತ್ಯಾಸವಿರಲಿ. ರಕ್ತಸಂಬಂಧಿನಿ ಸುತರಾಂ ಬೇಡ (ಬೋಧಾಯನ).

**ತಂ**ದೆಯ ಆರೋಗ್ಯದಿಂದ ಆ ಕನ್ಯೆಯ ಆರೋಗ್ಯವನ್ನು ಪರೀಕ್ಷಿಸು. ತಾಯಿಯ ಶೀಲದಿಂದ ಮಗಳ ನಡತೆಯನ್ನು ಊಹಿಸು. ಆಚಾರದಿಂದ ಕುಲವನ್ನು ತಿಳಿ (ವಿಷ್ಣು).

**ತ**ನಗಿಂತಲೂ ಎತ್ತರದ, ಉದ್ದದ ಹುಡುಗಿ ಬೇಡ. ಎದೆಯ ಮಟ್ಟಕ್ಕೆ ಬರದಿರುವ ಗಿಡ್ಡಳೂ ಬೇಡ. ಭುಜಮಟ್ಟಕ್ಕೆ ಅಥವಾ ಮೂಗುಮಟ್ಟಕ್ಕಿರುವ ಸ್ತ್ರೀ ಅತ್ಯುತ್ತಮ (ವಿಷ್ಣುಪುರಾಣ).

**ನಿ**ನ್ನ ಕಣ್ಣಿಗೆ ಹಿಡಿಸುವ ರೂಪವತಿಯಾಗಿದ್ದರೆ ಸಾಕು. ಅದಕ್ಕಿಂತಲೂ ಮುಖ್ಯವಾಗಿ ಗುಣವತಿಯಾಗಿರಲಿ (ಯಾಜ್ಞವಲ್ಕ್ಯ).

**ಅ**ನುಕೂಲೆ, ವಿಮಲಾಂಗಿ, ಕುಲಜೆ, ಕುಶಲೆ, ಸುಶೀಲಸಂಪನ್ನೆ. ಈ ಐದೂ ಸ್ತ್ರೀಗುಣ. ಐದರಲ್ಲೂ 'ಲ'ಕಾರವಿದೆ. ಇವು ಉಳ್ಳವಳು ಪಂಚಲಕಾರಳು. '**ಪಂಚ-ಲಕಾರಾಂ ಭಾರ್ಯಾಂ ಪುರುಷಃ ಪುಣ್ಯಾಧಿಕೋ ಲಭತೇ**' ಪಂಚಲಕಾರಪತ್ನಿಯನ್ನು ಪಡೆಯುವುದಕ್ಕೆ ಅಧಿಕಪುಣ್ಯಸಂಚಯನ ಬೇಕು ಎನ್ನುತ್ತಾನೆ ಸ್ಮೃತಿಕೌಸ್ತುಭಕಾರ.

## ಎಂತಹ ವರನಿಗೆ ಕನ್ಯಾದಾನ?

**ಗಂ**ಡು ಎಂಬ ಒಂದೇ ಅರ್ಹತೆ ಕನ್ಯಾದಾನಕ್ಕೆ ಸಾಲದು. ಆತನಲ್ಲಿ ಈ ಏಳು ಗುಣಗಳನ್ನು ಪರೀಕ್ಷಿಸಿ ಕನ್ಯೆಯನ್ನು ನೀಡಬೇಕಂತೆ.

**ಕುಲಂ ಚ ಶೀಲಂ ಚ ವಪುರ್ವಯಶ್ಚ**
**ವಿತ್ತಂ ಚ ವಿದ್ಯಾಂ ಚ ಸನಾಥತಾಂ ಚ ।**
**ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ**
**ಕನ್ಯಾ ಬುಧೈಃ ಶಿಷ್ಟ(ಶೇಷ)ಮಚಿಂತನೀಯಮ್ ॥**

'ಮನೆತನ, ನಡತೆ, ಚೆಲುವು, ವಯಸ್ಸು, ಸಂಪತ್ತು, ವಿದ್ಯೆ, ಭದ್ರತೆಯ ಭವಿಷ್ಯ. ಈ ಏಳು ತೃಪ್ತಿದಾಯಕವಾಗಿದ್ದರೆ ಬೇರೇನೂ ಯೋಚಿಸದೆ ಮಗಳನ್ನು ಕೊಡಿ' ಎನ್ನುತ್ತಿದೆ ಕವಿಭಣಿತಿ.

**ಆ**ಧುನಿಕಭಾಷೆಯಲ್ಲಿ Aಯಿಂದ G ತನಕದ ಸಪ್ತಗುಣಗಳೇ ಇವು. Age,

Beauty, Character, Dowry, Education, Future, Gotra. ಈ ಏಳು ಗುಣಗಳನ್ನೇ ಶ್ಲೋಕದಲ್ಲಿ ಹೇಳಿದ್ದು. Health, Interest ಎಂಬ ಮುಂದಿನ ಎರಡಕ್ಷರ ಜೋಡಿಸಿಕೊಳ್ಳುವುದು ಇನ್ನೂ ಒಳ್ಳೆಯದು.

**ಗ್ರ**ಹಮೈತ್ರ್ಯಾದಿ ಕೂಟಗಳ ಘಟನೆ ಇರಲಿ.

**ವ**ರನ ಜಾತಕದಲ್ಲಿ ವಧುವಿನ ಜಾತಕಕ್ಕಿಂತ ಅತ್ಯಧಿಕ ಕುಜದೋಷವಿರದಿರಲಿ.

**ಅ**ತಿಕೋಪಿಷ್ಠನಾದ, ನಿರ್ದಯಿಗೂ, ಸುರಾಪಾನವ್ಯಸನಿಗೂ ಕನ್ಯೆಯನ್ನು ಕೊಟ್ಟು ಹಾಳು ಮಾಡಿಕೊಳ್ಳಬೇಡಿ.

ಕನ್ಯಾದಾನ ಮಹಾದಾನಗಳಲ್ಲಿ ಒಂದು. ದಾನವನ್ನು ಪಡೆಯುವವನಿಗೆ ಕೆಲ ಅರ್ಹತೆಗಳಿವೆ. ಅದರಲ್ಲಿ ಸತ್ಕರ್ಮಾನುಷ್ಠಾನವೂ ಒಂದು. ಕನಿಷ್ಠ ಸಂಧ್ಯೆ-ಪೂಜೆಗಳ ಅರಿವೂ ಇಲ್ಲದ ವಿಪ್ರ ಕನ್ಯಾದಾನಕ್ಕೆ ಅರ್ಹನಾಗಲಾರ. ಕನ್ಯಾದಾನಾನಂತರದಲ್ಲಾದರೂ ಅವನನ್ನು ಸತ್ಕರ್ಮನಿಷ್ಠನನ್ನಾಗಿಸುವ ಜವಾಬ್ದಾರಿ ಕನ್ಯಾದಾತೃವಿಗೆ ಇದೆ.

## ಜಾತಕಘಟನೆ - ಮನೋಘಟನೆ

'ಯಜ್ಞೋಪವೀತಕ್ಕೆ ಬ್ರಹ್ಮಗ್ರಂಥಿ ಮತ್ತು ಕನ್ಯಾದಾನಕ್ಕೆ ಮಾಂಗಲ್ಯಗ್ರಂಥಿ. ಇವೆರಡರದ್ದೂ ಕಟ್ಟುವಿಕೆ ಮಾತ್ರ. ಬಿಚ್ಚುವಿಕೆ ಇಲ್ಲ' ಎಂಬ ಮಾತಿದೆ. ಅಂದರೆ ಮದುವೆ ಎಂಬುದು ಜೀವಮಾನಪೂರ್ತಿ ಜೊತೆಗಿರಬೇಕಾದ ಬಂಧನ. ಎಲ್ಲೋ ಬೆಳೆದ ಹುಡುಗಿಯೂ ಹುಡುಗನೂ ಒಮ್ಮನಸ್ಸಿನಿಂದ ಬಾಳುವ ಸಾಮರಸ್ಯ ಅವರಲ್ಲಿ ಬೇಕು. ಊನಾಂಗವಿಲ್ಲದ ಸುರೂಪ ಸುಗುಣ ಮಕ್ಕಳ ಮೂಲಕ ಇವರ ವಂಶ ವೃದ್ಧಿಸಬೇಕು. ಹೊರನೋಟದಿಂದ ವಧೂವರರನ್ನು ಆರಿಸುವಾಗ ಇವೆಲ್ಲ ಸರಿಯಿದೆಯೆಂದು ನಿರ್ಧರಿಸುವುದು ಶಕ್ಯವಿಲ್ಲ.

ಅದಕ್ಕಾಗಿ ನಮ್ಮ ಮುತ್ಸದ್ದಿ ಹಿರಿಯರು ಒಂದು ಮಾರ್ಗೋಪಾಯವನ್ನು ಸೂಚಿಸಿದರು. ಮೇಳಾಮೇಳಿಯ ಮೂಲಕ ಜ್ಯೋತಿಃಶಾಸ್ತ್ರದ ಮೂಲಕ ನಿರ್ಧರಿಸುವಂತೆ ಆದೇಶಿಸಿದರು. **ಕೂಟಘಟನೆ, ದೋಷಘಟನೆ** ಮತ್ತು **ಮನೋಘಟನೆ.** ಈ ಮೂರೂ ಸರಿಹೊಂದಿದರೆ ಮಾತ್ರ ವಿವಾಹ ಎಂದರು. ವಧೂವರರ ಪರಸ್ಪರಾವ-ಲೋಕನದಿಂದ ಮೊದಲ ನೋಟದಲ್ಲಿ 'ಆಗಬಹುದು' ಅಥವಾ 'ಆಗಲೇ ಬೇಕು' ಎಂಬ ಭಾವ ಈರ್ವರಲ್ಲೂ ಅಂಕುರಿಸಿದಲ್ಲಿ ಮನೋಘಟನೆಯಿದೆ ಎಂದರ್ಥ.

ವಧೂವರರ ಜಾತಕದಲ್ಲಿ ದ್ವಾದಶಕೂಟಗಳ ಹೊಂದಾಣಿಕೆಯನ್ನು ಗಮನಿಸಿ ಗರಿಷ್ಠ ಮೂವತ್ತಾರು ಅಂಕಗಳಲ್ಲಿ 18 ಅಂಕವಾದರೂ ಇದ್ದರೆ ಕೂಟಘಟನೆ ಇದೆ ಎಂದರ್ಥ. ಕುಜ-ರಾಹು-ಶನಿ-ಕೇತು ಗ್ರಹಗಳ ಮೂಲಕ ಸೂಚಿಸಲ್ಪಡುವ ದೋಷವು ಉಭಯಜಾತಕದಲ್ಲೂ ಸಮವಾಗಿದ್ದರೆ ದೋಷಘಟನೆಯಿದೆಯೆಂದು ನಿರ್ಧರಿಸಬೇಕು. ಈ ವಿಷಯದ ಬಗೆಗಿನ ನಿರ್ಧಾರಕ್ಕೆ ಜ್ಯೋತಿಃಶಾಸ್ತ್ರದ ಅರಿವು ಅಪೇಕ್ಷಿತ.

ಇಂದಿನ ಈ ಆಧುನಿಕಕಾಲದಲ್ಲೂ ಜಾತಕಘಟನೆ ಬೇಕೇ? ವಧೂವರರು ಮೊದಲೇ ಪರಸ್ಪರ ಮಾತನಾಡಿ, ವೈದ್ಯರಲ್ಲಿ ಪರೀಕ್ಷೆ ಮಾಡಿಸಿಕೊಂಡು, ಅರ್ಥೈಸಿ-ಕೊಂಡು ಸಮ್ಮತಿಸುವ ಸ್ಥಿತಿಯಲ್ಲೂ ಜಾತಕಘಟನಾದಿಗಳು ಪ್ರಸ್ತುತವೇ? ಎಂಬ ಪ್ರಶ್ನೆ ಇಂದು ಸಾರ್ವತ್ರಿಕವಾಗಿದೆ. ಆದರೂ 'ಪ್ರಸ್ತುತ' ಎಂದೇ ಉತ್ತರಿಸುವ ಅನಿವಾರ್ಯತೆ-ಯಿದೆ.

'ಪರಸ್ಪರ ಹೊಂದಾಣಿಕೆಯ ಜೀವನ'ವೆಂಬುದಷ್ಟೇ ವಿವಾಹದ ಗುರಿಯಲ್ಲ. 'ಸುದೀರ್ಘದಾಂಪತ್ಯಜೀವನ, ಆರೋಗ್ಯಯುಕ್ತ ಸತ್ಸಂತತಿ' ಎಂಬುದೂ ಅದರ ಮುಖ್ಯ ಉದ್ದೇಶ. ಈ ಉದ್ದೇಶದ ಈಡೇರಿಕೆ ಜಾತಕ-ದೋಷಘಟನೆಯ ಮೂಲಕವೇ ಶಕ್ಯ .

ಅವರೊಬ್ಬರು ಅಸಾಧಾರಣಜ್ಯೋತಿಷ್ಕರು. ಮುಖಲಕ್ಷಣದಿಂದಲೇ ವ್ಯಕ್ತಿಯ ಜನ್ಮನಕ್ಷತ್ರವನ್ನು ನಿರ್ಧರಿಸಿ ಹೇಳಬಲ್ಲ ವಿದ್ವತ್ತೆ ಅವರದು. ಇಂದಿಗೂ ಬೆಂಗಳೂರಿನಲ್ಲಿ ಇದ್ದಾರೆ. ಅದೊಂದು ದಿನ ನನ್ನೊಂದಿಗಿದ್ದರು. ನೊಂದ ಓರ್ವದಂಪತಿಗಳು ಅಲ್ಲಿ ಬಂದರು. ಅವರು ಜ್ಯೋತಿಷ್ಕರಲ್ಲಿ ಸಲಹೆ ಕೇಳಲು ಬಂದಿದ್ದರು. ಆ ಅಪರಿಚಿತ ದಂಪತಿಗಳ ಮುಖದರ್ಶನಮಾತ್ರದಿಂದಲೇ ಈ ಜ್ಯೋತಿಷಿಗಳೆಂದರು - ''ಈಕೆಯದು ಆರ್ದ್ರಾ, ನಿಮ್ಮದು ಜ್ಯೇಷ್ಠಾ ನಕ್ಷತ್ರ. ಏಕನಾಡಿ. ಈ ದೋಷಪರಿಹಾರಕ ಇತರ ಕೂಟಗಳೂ ಇಲ್ಲ. ಆದ್ದರಿಂದ ಸಂತಾನಭಾಗ್ಯ ಬಹುಕಷ್ಟಸಾಧ್ಯ. ಈಗಾಗಲೇ ಎರಡು ಮಕ್ಕಳು ಸತ್ತಿರಬೇಕಲ್ಲಾ? ನಿತ್ಯವೂ ಅಶ್ವತ್ಥಸೇವೆ ಮಾಡಿ. ದೇವರು ಒಳಿತು ಮಾಡಿಯಾನು''.

ಆ ದಂಪತಿಗಳ ಸಮಸ್ಯೆಯೇ ಅದಾಗಿತ್ತು. ಗರ್ಭಿಣಿಯಾದರೂ ಗರ್ಭಸ್ರಾವವೋ ಗರ್ಭಪಾತವೋ ಆಗಿಬಿಡುತ್ತಿತ್ತು. ಈಗ ಆಕೆ ಮೂರನೆ ಬಾರಿ ಗರ್ಭಿಣಿ. ಭಯಗ್ರಸ್ಥರಾಗಿ ಇಲ್ಲಿ ಬಂದಿದ್ದಾರೆ ಅವರು.

ಜ್ಯೋತಿಷ್ಕರು ಪರಿಹಾರವೇನೋ ಹೇಳಿದರು. ದಂಪತಿಗಳು ಹೋದಮೇಲೆ ನನ್ನಲ್ಲಂದರು ''ಈ ದಂಪತಿಗಳಿಗೆ ಸಂತಾನ ಹುಟ್ಟಿದರೂ ಕೈಕಾಲು ಸರಿಯಿರಲಾರದು.

ಚೂರಾದರೂ ಹೊಂದಾಣಿಕೆ ಬೇಡವೆ ಜಾತಕದಲ್ಲಿ!!''.

ಇಂತಹ ಘಟನೆಗಳನ್ನು ಅಲ್ಲಲ್ಲಿ ಗಮನಿಸುತ್ತೇವೆ. ಸಾಫ್ಟ್‌ವೇರ್ ಅಭಿಯಂತರ-ನೋರ್ವ ಜ್ಯೋತಿಷ್ಕರ ಸನಿಹಕ್ಕೆ ಬಂದು ಸ್ತ್ರೀಪುರುಷರ ಎರಡೂ ಜಾತಕ ಮುಂದಿಟ್ಟನಂತೆ. ಜ್ಯೋತಿಷ್ಕರು 'ಈ ಎರಡೂ ಜಾತಕಕ್ಕೆ ವಿವಾಹ ಕೂಡದು' ಎಂದು ಬಿಟ್ಟರು. ಆ ಭೂಪತಿ ಅವಕ್ಕಾಗಿಬಿಟ್ಟ. ''ಸ್ವಾಮಿ ನಾವು ವಿವಾಹವಾಗಿ 4ವರ್ಷಗಳಾಗಿವೆ. ನಮ್ಮ ಎರಡನೆಯ ಮಗು 3ತಿಂಗಳಿನದ್ದು. ಏನೋ ವಿಚಿತ್ರರೋಗ ಕಾಡಿದೆ. ಡಾಕ್ಟರರೂ ಅದರ ಉಳಿವಿಗೆ ಹೆಣಗುತ್ತಿದ್ದಾರೆ. ಏನು ಮಾಡಲಿ?''.

ಮಗುವಿನ ಅನಾರೋಗ್ಯಕ್ಕೆ ಇವರ ಜಾತಕದ ಅಘಟನೆ ಕಾರಣವೋ ಗೊತ್ತಿಲ್ಲ. ಆ ದಂಪತಿಗಳಂತೂ ಅದಕ್ಕೇ ಹೀಗಾಯಿತು ಎಂದು ಕೊರಗುತ್ತಿದ್ದಾರೆ.

ಜ್ಯೌತಿಷವಂತೂ ಸುಳ್ಳಲ್ಲ. ಜ್ಯೋತಿನಿರ್ಧರಿತ ಕಾಲದಲ್ಲಿ ಗ್ರಹಣವನ್ನೂ, ಉದಯಾಸ್ತಮಗಳನ್ನೂ ಹೊಂದುವ ಸೂರ್ಯಚಂದ್ರರೇ ಈ ಜ್ಯೋತಿಷ್ಯದ ಸತ್ಯತೆಗೆ ಸಾಕ್ಷಿ. ಜ್ಯೋತಿಷ್ಕನ ಅಪರಿಪೂರ್ಣತೆಯಿಂದ ಫಲ ಸುಳ್ಳಾದೀತೇ ಹೊರತು, ಶಾಸ್ತ್ರದ ಅಯಥಾರ್ಥತೆಯಿಂದಲ್ಲ.

ಆದರೂ ವಧೂವರರ ಜಾತಕಗಳ ಘಟನೆಯನ್ನು ಅವಲೋಕಿಸುವಾಗ ಆದಷ್ಟು ಹೊಂದಾಣಿಕೆಯಾಗುವಂತೆ ನೋಡುವ ಔದಾರ್ಯವನ್ನು ಜ್ಯೋತಿಷಿಗಳು ತೋರುವುದು ಒಳ್ಳೆಯದೆಂದು ತೋರುತ್ತದೆ. ಕೆಲವೊಮ್ಮೆ ಕೂಲಂಕಷ ಅವಲೋಕನೆ ಮಾಡುವ ಜ್ಯೋತಿಷಿಗಳು 100ರಲ್ಲಿ 98ಜಾತಕಗಳನ್ನು ನಿರಾಕರಿಸಿಬಿಡುತ್ತಾರೆ. ಸ್ವೀಕರಿಸಿದ ಎರಡು ಜಾತಕಗಳಿಗೆ ಮನೋಘಟನೆ ಇರುವುದಿಲ್ಲ. ಕೊನೆಗೆ ಈ ಹುಡುಗ ಘಟನಾವಲೋಕನದ ವ್ಯವಸ್ಥೆಯನ್ನೇ ದ್ವೇಷಿಸುವ ಸ್ಥಿತಿ ಒದಗಿ ಬಂದಿದ್ದೂ ಇದೆ.

ಇಷ್ಟಕ್ಕೂ ಕೂಟಘಟನೆ, ದೋಷಘಟನೆ, ಮನೋಘಟನೆ ಎಂಬ ಮೂರು ಘಟನೆ (ಹೊಂದಿಕೆ)ಗಳಲ್ಲಿ ಮನೋಘಟನೆಗೇ ಹೆಚ್ಚು ಪ್ರಾಶಸ್ತ್ಯ. ಆದ್ದರಿಂದಲೇ ಮೇಳಾಮೇಳಿ ಗ್ರಂಥದ ಕೊನೆ ಮಾತು ಇದು -- 'ಎಲ್ಲಾ ಘಟನೆ (ಹೊಂದಿಕೆ)ಗಳಿಗಿಂತ ಮನೋ-ಘಟನೆ 100ಪಟ್ಟು ಹೆಚ್ಚಿನದು'. ಆಪಸ್ತಂಬರ ಮಾತೂ ಹೀಗಿದೆ -- '**ಯಸ್ಯಾಂ ಮನಶ್ಚಕ್ಷುಷೋಃ ನಿರ್ಬಂಧಸ್ತಸ್ಯಾಮೃದ್ಧಿಃ**' 'ಮನಸ್ಸು ಕಣ್ಣು ಒಪ್ಪಿದರೆ ಸಾಕು. ಆಕೆ-ಯೊಡನೆ ವಿವಾಹದಿಂದ ವೃದ್ಧಿಯಿದೆ''.

ಒಟ್ಟಿನಲ್ಲಿ ಮನೋಘಟನೆಯಿದ್ದಾಗ ಜಾತಕದ ಅಪರಿಹಾರ್ಯದೊಡ್ಡದೋಷ-

ಗಳಿದ್ದಾಗ ಮಾತ್ರ ಜಾತಕವನ್ನು ನಿರಾಕರಿಸಬೇಕು. ಉಳಿದಂತೆ ಸಣ್ಣಪುಟ್ಟ ದೋಷ-ಗಳಿದ್ದರೂ ಸಂತಾನಾದಿ ಪ್ರತಿಬಂಧಕವಿಲ್ಲದಿದ್ದಲ್ಲಿ ಹೊಂದಾಣಿಕೆ ಇದೆಯೆಂದೇ ಜ್ಯೋತಿಷಿಗಳು ಆದೇಶಿಸುವುದು ಉಚಿತ.

ಒಂದು ವಿಷಯ -- ಮಹಾತ್ಮರಾದ ಅನುಭಾವಿಗಳು ಅಥವಾ ಸಿದ್ಧಪುರುಷರು ಹರಸಿ ವಿವಾಹವಾಗಬಹುದೆಂದು ಹೇಳಿದ ಮೇಲೆ ಕನ್ಯಾವರರ ಜಾತಕಾದಿಗಳನ್ನು ವಿಮರ್ಶಿಸಲು ಹೋಗಬಾರದು. ಸಿದ್ಧಪುರುಷರ ಮಾತು ಜ್ಯೋತಿಷ್ಯಾದಿ ಪ್ರಮಾಣಗಳೆಲ್ಲವುಗಳಿಗಿಂತಲೂ ಹೆಚ್ಚು ಪ್ರಭಾವಿ. ಅವರು ಮುಂದೆ ನಡೆಯಲಿರುವಂತೆ ಹೇಳುವುದಿಲ್ಲ. ಅವರು ಹೇಳಿದಂತೆ ಮುಂದೆ ನಡೆಯುತ್ತದೆ. '**ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ**'.

ಭಗವದ್ಗೀತೆ, ತಾತ್ಪರ್ಯನಿರ್ಣಯ ಮುಂತಾದ ಶ್ರದ್ಧಾಕೇಂದ್ರಗ್ರಂಥಗಳ ಮೂಲಕ ಸಿದ್ಧರಿಂದ ವಧೂವರರ ಬಗೆಗೆ ವಿಚಾರಿಸುವ ಸಂಪ್ರದಾಯವೂ ಇದೇ ಹಿನ್ನೆಲೆಯಲ್ಲಿ ಬಂದಿದೆ. ಅನುಷ್ಠಾನನಿರತರಾದ ಅರ್ಚಕರ ಮೂಲಕ ದೇವರ ಮುಂಭಾಗದಲ್ಲಿ ಹೂ ಹಾಕಿ ಶಕುನ ನಿರೀಕ್ಷಿಸುವ ವಿಧಿಯೂ ಇದೇ ದೃಷ್ಟಿಯಿಂದ ಗ್ರಾಹ್ಯ.

ವಿದ್ಯಾಮಾನ್ಯರು ಅನುಭಾವಿ ಸಂತ. ಅವರಲ್ಲಿ ಓದುತ್ತಿದ್ದ ಹುಡುಗನೊಬ್ಬ ಹೆಣ್ಣು ಹುಡುಕುತ್ತಿದ್ದ. ತಂದೆ ಇಲ್ಲದ ಹುಡುಗನವ. ಅದೊಂದು ದಿನ ಇನ್ನೋರ್ವ ಶಿಷ್ಯನ ಪುತ್ರಿ ತನ್ನ 21ನೆಯ ಹುಟ್ಟುಹಬ್ಬದ ನಿಮಿತ್ತ ಗುರುಗಳಲ್ಲಿ ಮಂತ್ರಾಕ್ಷತೆ ಸ್ವೀಕರಿಸಬಂದಳು. ಗುರುಗಳಿಗೆ ಏನೆನಿಸಿತೋ? ಆಕೆಯ ತಂದೆತಾಯಂದಿರನ್ನು ಕರೆಸಿದರು. 'ನೀವು ಒಪ್ಪುವುದಾದರೆ ಈ ಹುಡುಗನಿಗೆ ನಿಮ್ಮ ಮಗಳನ್ನು ಕೊಟ್ಟು ವಿವಾಹ ಮಾಡಬಹುದಲ್ಲ?' ಎಂದರು. ಜಾತಕ ಎಲ್ಲ ಹೇಗೆ?. ವಿದ್ಯಾಮಾನ್ಯರು ಪಕ್ಕದಲ್ಲಿದ್ದ 'ತಾತ್ಪರ್ಯನಿರ್ಣಯ' ಹಿಡಿದರು. ಕೃಷ್ಣನನ್ನು ಧ್ಯಾನಿಸುತ್ತಾ ಪುಸ್ತಕ ಬಿಡಿಸಿದರು. ಬಲರಾಮ ರೇವತಿಯರ ವಿವಾಹಪ್ರಸಂಗ ಅಲ್ಲಿತ್ತು. 'ಅವಶ್ಯ ವಿವಾಹ ನೆರವೇರಿಸಿ' ಎಂದರು. ಮದುವೆ ನಡೆಯಿತು. ಆ ದಂಪತಿಗಳು ಇಂದಿಗೂ ಅನ್ಯೋನ್ಯದಾಂಪತ್ಯದಿಂದ ಮಕ್ಕಳು ಮೊಮ್ಮಕ್ಕಳೊಡನೆ ಬಾಳಿದ್ದಾರೆ. ಇಂಥಹ ಪ್ರಸಂಗಗಳು ಒಂದು ಅಲ್ಲ, ಎರಡೂ ಅಲ್ಲ. ಅನೇಕವಿವೆ.

## ಆಶ್ಲೇಷಾ ಜ್ಯೇಷ್ಠಾ ನಕ್ಷತ್ರದ ಹೆಣ್ಣು ತರಬಾರದೇ?

**ಆ**ಶ್ಲೇಷಾ, ಮೂಲ, ಜ್ಯೇಷ್ಠಾ, ವಿಶಾಖಾ ಎಂಬ ನಾಲ್ಕುನಕ್ಷತ್ರದ ಹೆಸರೆತ್ತಿದರೆ ಸಾಕು ಆ ಸ್ತ್ರೀಜಾತಕವನ್ನು ದೂರವಿಟ್ಟು ಬಿಡುತ್ತಾರೆ ಗಂಡು ಹೆತ್ತವರು. ಆಕೆಯನ್ನು

ಮನೆತುಂಬಿಸಿಕೊಂಡರೆ ನಮ್ಮಲ್ಲೊಂದು ಸಾವು ಸಂಭವಿಸಿ ಬಿಡುತ್ತದೆ ಎಂಬ ಭವಿಷ್ಯದ ಭೀತಿ ಇವರಿಗೆ. ಪಾಪ, ಆ ನಕ್ಷತ್ರದ ಹುಡುಗಿಯ ಗತಿಯೇನು? ಇಷ್ಟೊಂದು ಕ್ರೂರ-ವಾಗಿ ಜ್ಯೋತಿಷ್ಯ ನಡೆಸಿಕೊಳ್ಳುತ್ತದೆಯೇ?

ಒಂದು ಮಾತಿದೆ --

**ಮೂಲಜಾ ಶ್ವಶುರಂ ಹಂತಿ ವ್ಯಾಲಜಾ ತು ತದಂಗನಾಮ್ ।**
**ಜ್ಯೇಷ್ಠಜಾ ಭಾವುಕಂ ಹಂತಿ ದೇವರಂ ತು ದ್ವಿದೈವಜಾ ॥**

''ಮೂಲಾನಕ್ಷತ್ರದ ಕನ್ಯೆಯು ಶ್ವಶುರ(ಗಂಡನ ತಂದೆ)ನನ್ನೂ, ಆಶ್ಲೇಷಾ ನಕ್ಷತ್ರದವಳು ಅತ್ತೆಯನ್ನೂ, ಜ್ಯೇಷ್ಠಾ ನಕ್ಷತ್ರದವಳು ಗಂಡನ ಅಣ್ಣನನ್ನೂ, ವಿಶಾಖಾ ನಕ್ಷತ್ರದವಳು ಗಂಡನ ತಮ್ಮನನ್ನೂ ಕೊಲ್ಲುವಳು'' ಎಂದಿದರ ಅರ್ಥ.

ಅದಕ್ಕಾಗಿ ಮೂಲಾ ನಕ್ಷತ್ರದ ವಧುವನ್ನು ತಂದೆಯಿಲ್ಲದ ವರನಿಗೆ, ಆಶ್ಲೇಷೆಯನ್ನು ತಾಯಿಯಿಲ್ಲದ ವರನಿಗೆ, ಜ್ಯೇಷ್ಠಾದಲ್ಲಿ ಹುಟ್ಟಿದವಳನ್ನು ಜ್ಯೇಷ್ಠಪುತ್ರನಿಗೆ, ವಿಶಾಖೆಯ ಕನ್ನಿಕೆಯನ್ನು ತಮ್ಮನಿಲ್ಲದ ಕನಿಷ್ಠಪುತ್ರನಿಗೆ ವಿವಾಹಮಾಡಲು ಶಿಫಾರಸು ಮಾಡ-ಲಾಗುತ್ತದೆ. ತಪ್ಪಲ್ಲ; ಸಮಂಜಸ ಪದ್ಧತಿ ಇದು.

ಇಷ್ಟಕ್ಕೂ ಈ ಮೇಲಿನ ಶ್ಲೋಕ ಆಶ್ಲೇಷಾನಕ್ಷತ್ರಾದಿಜನನಶಾಂತಿಯ ಸಮಯದಲ್ಲಿ ಉಲ್ಲೇಖಿಸಲ್ಪಡುತ್ತದೆ. ಇಲ್ಲಿರುವ 'ಹಂತಿ' ಎಂಬ ಶಬ್ದಕ್ಕೆ 'ಕೊಲ್ಲುವಳು' ಎಂದೇ ಅರ್ಥವಲ್ಲ. ಅನಿಷ್ಟವಿದೆ ಎಂದಷ್ಟೇ ಅರ್ಥ. ಇಲ್ಲವಾದಲ್ಲಿ ಕೃಷ್ಣಚತುರ್ದಶಿಯೋ, ಅಮಾವಾಸ್ಯೆಯೋ ಹುಟ್ಟಿದ ಮಗುವಿನಿಂದ ತಂದೆತಾಯಂದಿರು ಸತ್ತು ಬಿಡಬೇಕಾದೀತು! ಅಲ್ಲೂ ಹೀಗೇ ಹೇಳಿದೆ - **ದ್ವಿತೀಯೇ ಪಿತರಂ ಹಂತಿ । ತೃತೀಯೇ ಮಾತರಂ ತಥಾ**' ಇತ್ಯಾದಿ. ಇಲ್ಲೆಲ್ಲಾ 'ಹನ ಹಿಂಸಾಗತ್ಯೋಃ' ಎಂಬ ಮೂಲದ ಹಿಂಸಾರ್ಥಕವಾದ 'ಹಂತಿ'ಶಬ್ದವನ್ನು ಅನಿಷ್ಟವಿದೆ ಎಂಬರ್ಥದಲ್ಲಿ ಬಳಸಲಾಗಿದೆ. ಆಶ್ಲೇಷೆಯ ಕನ್ನಿಕೆಯನ್ನು ಮನೆತುಂಬಿಸಿಕೊಂಡು ಮೊಮ್ಮಗಳಿಗೆ ಮದುವೆಯಾಗುವವರೆಗೂ ನೆಮ್ಮದಿಯಿಂದ ಬದುಕಿದ ಅತ್ತೆಯಂದಿರು ಅದೆಷ್ಟಿಲ್ಲ?

ಅಲ್ಲದೆ ಆಶ್ಲೇಷಾದಿನಕ್ಷತ್ರಗಳಲ್ಲಿ ಎಲ್ಲಾ ಪಾದದಲ್ಲೂ ಸಮಾನದೋಷವಿಲ್ಲ. ಜನನಶಾಂತಿಯನ್ನು ನಡೆಸಿರುವುದರಿಂದ ದೋಷವು ಬಹ್ವಂಶ ಶಮನವಾಗಿರುತ್ತದೆ. ಎಲ್ಲಾ ಜ್ಯೋತಿಷ್ಯದ ಅಂಶಗಳನ್ನೂ ಗಮನಿಸಬೇಕು. 'ಆಶ್ಲೇಷಾನಕ್ಷತ್ರದ ಸೊಸೆ' ಎಂಬಿಷ್ಟೇ ಕಾರಣದಿಂದ ಹೆದರಿಬಿಡುವ ಭ್ರಮೆ ಬೇಡ.

# ವಿವಾಹಮುಹೂರ್ತ

ನಿಶ್ಚಿತಾರ್ಥಕ್ಕೆ ಮುಂಚಿತವಾಗಿ ಕನ್ಯೆಯ ಮಾತಾಪಿತೃಗಳು ಜ್ಯೋತಿರ್ವಿದ್ಯೆಯನ್ನು ಬಲ್ಲ ವಿಪ್ರನ ಬಳಿಗೆ ಬರುತ್ತಾರೆ. ವಿಪ್ರರ ಮುಂದೆ ಫಲಪುಷ್ಪವಿಟ್ಟು ನಮಿಸಿ, ವಧೂವರರ ನಕ್ಷತ್ರವನ್ನು ಹೇಳಿ ಮದುವೆಗೆ ಮುಹೂರ್ತ ವಿಚಾರಿಸುತ್ತಾರೆ.

**ಶುಭೇ ದಿನೇ ದೈವವಿದಂ ತ್ವಭಿಜ್ಞಂ ತಾಂಬೂಲಪುಷ್ಪಾಕ್ಷತಪೂರ್ಣಪಾತ್ರಃ।**
**ಕರ್ತಾ ಚ ಗತ್ವಾ ಪ್ರಣಿಪತ್ಯ ಪೃಚ್ಛೇತ್ ನಿವೇದ್ಯ ತಸ್ಮೈ ವರಕನ್ಯಯೋರ್ಭಮ್ ॥**
**(ಮುಹೂರ್ತದರ್ಪಣ)**

ವಿವಾಹದ ದಿನವನ್ನು ನಿಶ್ಚಯಿಸುವ ಜವಾಬ್ದಾರಿ ಕನ್ಯಾಪಕ್ಷದ್ದು. ವಿವಾಹ ನಡೆಯಬೇಕಾದ ಸ್ಥಳ ಯಾವದು? ಕನ್ಯೆಯನ್ನು ಎಷ್ಟು ಬಂಗಾರದಿಂದ ಅಲಂಕರಿಸಬೇಕು? ಎಷ್ಟು ವಿಜೃಂಭಣೆಯ ಸೀರೆ ಉಡಿಸಿ ದಾನವೀಯಬೇಕು? ಎಲ್ಲಾ ವಿಷಯಗಳೂ ಕನ್ಯಾಪಿತೃವಿನ ನಿರ್ಧಾರಕ್ಕೆ ಒಳಪಟ್ಟದ್ದು. ಇದರಲ್ಲಿ ವರಪಕ್ಷದವರು ಮೂಗು ತೂರಿಸಬಾರದು.

ವಿದೇಹದಲ್ಲಿ ಸೀತಾಕಲ್ಯಾಣದ ಸಿದ್ಧತೆ ನಡೆದಿದೆ. ದಶರಥನೂ ಸಪರಿವಾರನಾಗಿ ನಾಲ್ಕೇ ದಿನಗಳ ಪ್ರಯಾಣದಿಂದ ಅಯೋಧ್ಯೆ ಬಿಟ್ಟು ವಿದೇಹ ತಲುಪಿದ್ದಾನೆ. ಜನಕರಾಜ ಸ್ವಾಗತಿಸಿ ಸತ್ಕರಿಸಿ ಕೇಳುತ್ತಾನೆ. ''ರಾಜೇಂದ್ರ! ನಾಳೆ ಪ್ರಭಾತದಲ್ಲಿ ನಿಶ್ಚಿತವಾದ ವಿವಾಹವನ್ನು ತಾವು ಸುಧಾರಿಸಿಕೊಡಬೇಕು''. ಅದಕ್ಕೆ ದಶರಥನ ಉತ್ತರ - 'ಕೊಡುವವರು ನೀವು; ಪಡೆಯುವವರು ನಾವು; ಪಡೆಯುವವರು ಕೊಡುವವರು ಹೇಳಿದಂತೆ ಕೇಳಬೇಕು. ದಾತೃಗಳಾದ ತಾವು ಹೇಗೆನ್ನುತ್ತೀರೋ ಹಾಗೆ ನಾವು ನಡೆಯುತ್ತೇವೆ'.

**ಪ್ರತಿಗ್ರಹೋ ದಾತೃವಶಃ ಶ್ರುತಮೇತನ್ಮಯಾ ಪುರಾ।**
**ಯಥಾ ವಕ್ಷ್ಯತಿ ಧರ್ಮಜ್ಞ ತತ್ ಕರಿಷ್ಯಾಮಹೇ ವಯಮ್ ॥ (ವಾ.ರಾ.)**

ಇಂತಿಷ್ಟೇ ಬಂಗಾರ ಹಾಕಬೇಕು. ಇಂತಹ ಭಕ್ಷ್ಯಭೋಜ್ಯಗಳ ವಿಜೃಂಭಣೆಯ ಆತಿಥ್ಯ ನಡೆಯಬೇಕು ಎಂದು ಕೇಳುವ ಅಥವಾ ಆದೇಶಿಸುವ ಯಾವ ಹಕ್ಕೂ ವರನ ಪಕ್ಷದವರಿಗೆ ಇರುವುದಿಲ್ಲ. ವರಪಕ್ಷದ ಕಡೆಯಿಂದ ಬರುವ ದಿಬ್ಬಣಿಗರನ್ನು ಅವರ ಅಂತಸ್ತು, ಹಿರಿತನಗಳಿಗನುಗುಣವಾಗಿ ಉಪಚರಿಸುವ ಜವಾಬ್ದಾರಿ ವಧೂಪಕ್ಷಕ್ಕಿದೆ. ಎಲ್ಲಾ ವಿಷಯಗಳೂ ವಧೂಪಕ್ಷದ ನಿರ್ಧಾರವನ್ನು ಅನುಸರಿಸಿದ್ದರೂ ವರಪಕ್ಷದೊಂದಿಗೆ ಸಮಾಲೋಚಿಸಿಯೇ ಆ ಕೆಲಸಗಳು ಕಾರ್ಯಗೊಳ್ಳುತ್ತವೆ. ಇದು ಪರಸ್ಪರ ಗೌರವಿಸಿಕೊಳ್ಳುವ ಕ್ರಮ.

**ವಿವಾಹದ ಮುಹೂರ್ತದಲ್ಲಿ ಇರಬೇಕಾದ ಗುಣಗಳೇನು? ಇರಬಾರದ ದೋಷಗಳಾವುವು?** ಈ ಬಗ್ಗೆ ಸೂತ್ರಗ್ರಂಥಗಳಾಗಲೀ, ಕಾರಿಕೆಗಳಾಗಲೀ ವಿಶೇಷವಾಗಿ ಏನೂ ಹೇಳಿಲ್ಲ. ಉಪನಯನಮುಹೂರ್ತದ ಬಗ್ಗೆ ಉದ್ದುದ್ದ ಬರೆದಿರುವ ಈ ಗ್ರಂಥಗಳು ವಿವಾಹಮುಹೂರ್ತದ ಬಗೆಗೆ ಅಲ್ಪಭಾಷಿಯಾಗಿರುವುದು ವಿಚಿತ್ರ. ಸ್ಮೃತಿಗಳ ಮೂಲಕ ವಿವಾಹಮುಹೂರ್ತ ನಿರ್ಧರಿಸಬೇಕು.

**ವಿವಾಹಕ್ಕೆ ಉಚಿತ ಮಾಸ -** ಆಷಾಢ, ಮಾಘ, ಫಾಲ್ಗುಣಗಳನ್ನು ಬಿಟ್ಟು ಉಳಿದೆಲ್ಲಾ ಮಾಸಗಳು ಉಚಿತ. (ಧನುರ್ಮಾಸ ಪ್ರಶಸ್ತವಲ್ಲ). ಅಧಿಕಮಾಸ ತ್ಯಾಜ್ಯ.

**ವಿವಾಹೋಚಿತ ತಿಥಿ -** ಅಮಾವಾಸ್ಯೆ ಒಂದನ್ನು ಬಿಟ್ಟು ಉಳಿದ ಯಾವುದೇ ತಿಥಿಯಲ್ಲಿ ವಿವಾಹ ಮಾಡಬಹುದು. ಏಕಾದಶಿಯಂದು ಅನ್ನದಾನವು ಅಶಕ್ಯವಾದ್ದರಿಂದ ಅಂದು ಮತ್ತು ದ್ವಾದಶಿಯಂದು ಮಾಧ್ವಸಂಪ್ರದಾಯದಲ್ಲಿ ವಿವಾಹ ನಡೆಯುವುದಿಲ್ಲ.

**ವಿವಾಹೋಚಿತವಾರ -** ಮಂಗಳವಾರವೊಂದನ್ನು ಬಿಟ್ಟು ಉಳಿದ ಯಾವುದೇ ವಾರಗಳು ಉಚಿತ. ಸಮಾವರ್ತನೆಯೂ ಅಂದೇ ನಡೆಯುವುದಾದರೆ ಶ್ಮಶ್ರುಕೇಶ-ಕರ್ಮವಿರುವುದರಿಂದ ಶನಿವಾರವೂ ತ್ಯಾಜ್ಯ.

ಗುರು-ಶುಕ್ರರು ಅಸ್ತಂಗತರಾಗಿರುವಾಗ ಅರ್ಥಾತ್ ಮೌಢ್ಯವಿರುವ ಕಾಲದಲ್ಲಿ ವಿವಾಹ ಕೂಡದು. ಸೂರ್ಯಚಂದ್ರರ ಖಗ್ರಾಸಗ್ರಹಣವಿದ್ದಲ್ಲಿ ಅದಕ್ಕಿಂತ ಪೂರ್ವದಲ್ಲಿ ಪರದಲ್ಲೂ ಏಳೇಳು ದಿನಗಳನ್ನು ಬಿಡಬೇಕು. ಖಂಡಗ್ರಾಸವಿದ್ದಲ್ಲಿ ಮೂರು ಮೂರು ದಿನ ಬಿಡಬೇಕು. ಪಿತೃಮಾತೃಗಳ ಶ್ರಾದ್ಧವಿರುವ ಪಕ್ಷದಲ್ಲಿ ತಿಥಿಯ ತನಕದ ದಿನಗಳು ವಿವಾಹಕ್ಕೆ ವರ್ಜ್ಯ.

ಪಂಚಾಂಗದಲ್ಲಿ ನಿರ್ದಿಷ್ಟವಾದ ನಿರ್ದುಷ್ಟಮುಹೂರ್ತಗಳಲ್ಲಿ ವಧೂವರರ ನಕ್ಷತ್ರಗಳಿಗೂ ಕನ್ಯಾದಾತೃಗಳ ನಕ್ಷತ್ರಗಳಿಗೂ ಆನುಕೂಲ್ಯವನ್ನು (ತಾರಾನುಕೂಲ್ಯ) ಗಮನಿಸಿ ದಿನವನ್ನು ನಿಗದಿ ಪಡಿಸಬೇಕು. ಆ ದಿನಗಳಲ್ಲಿ ಕನ್ಯೆಗಾಗಲೀ ಕನ್ಯಾಮಾತೃವಿಗಾಗಲೀ ರಜಸ್ವಲೆಯಾಗುವಿಕೆ ಮುಂತಾದ ಅನಿವಾರ್ಯತೊಂದರೆಗಳು ಇರದಂತೆ ಮುಂದಾಲೋಚನೆ ವಹಿಸಬೇಕು.

## ತ್ರಿಜ್ಯೇಷ್ಠ ಮತ್ತು ಪಂಚಜ್ಯೇಷ್ಠ

ಜ್ಯೇಷ್ಠಾ ನಕ್ಷತ್ರದ ಕನ್ಯೆಯನ್ನು ಜ್ಯೇಷ್ಠಕುಮಾರನಿಗೆ ಕೊಟ್ಟು ವಿವಾಹ ಮಾಡುವಾಗ ಜ್ಯೇಷ್ಠಮಾಸ ಕೂಡದು. ಕನ್ನಿಕೆಯು ಜ್ಯೇಷ್ಠಾ ನಕ್ಷತ್ರದವಳು ಎಂಬುದು ಒಂದು ಜ್ಯೇಷ್ಠ.

ವರನು ಜ್ಯೇಷ್ಠನಾಗಿದ್ದಾನೆ ಎಂಬುದು ಎರಡನೆಯದು. ಮಾಸವೂ ಜ್ಯೇಷ್ಠವಾದಾಗ ತ್ರಿಜ್ಯೇಷ್ಠ ಎನ್ನಲಾಗುತ್ತದೆ. ಈ ಯೋಗವು ದಂಪತಿಗಳಲ್ಲಿ ಕಲಹಕ್ಕೆ ಕಾರಣ. ಹಾಗೆಯೇ ಜ್ಯೇಷ್ಠನಕ್ಷತ್ರದಲ್ಲಿ ಜನಿಸದಿದ್ದರೂ ಜ್ಯೇಷ್ಠ ಕನ್ಯೆಯಾಗಿದ್ದರೆ ಆ ಜ್ಯೇಷ್ಠೆಯ ಜೊತೆಗೆ ಜ್ಯೇಷ್ಠಪುತ್ರನಿಗೆ ಜ್ಯೇಷ್ಠ ಮಾಸದಲ್ಲಿ ವಿವಾಹ ಮಾಡಬಾರದು.

ಈ ಜ್ಯೇಷ್ಠಕನ್ಯೆ ಹಾಗೂ ಜ್ಯೇಷ್ಠ ಕುವರರು ಜ್ಯೇಷ್ಠಾನಕ್ಷತ್ರದಲ್ಲೇ ಜನಿಸಿದ್ದರೆ ಜ್ಯೇಷ್ಠ ಮಾಸವೂ ಸೇರಿದಾಗ ಪಂಚಜ್ಯೇಷ್ಠವಾಗುವುದು.

**ಆದ್ಯಗರ್ಭೇ ದ್ವಯೋಃ ಸ್ಯಾತಾಂ ಜ್ಯೇಷ್ಠಾ ನಕ್ಷತ್ರಜಾತಯೋಃ ।**
**ಜ್ಯೇಷ್ಠಮಾಸೇ ನ ಕುರ್ವೀತ ವಿವಾಹಂ ಜ್ಯೇಷ್ಠಪಂಚಕೇ ॥**

ಈ ಜ್ಯೇಷ್ಠಾಪಂಚಕಯೋಗದ ವಿವಾಹ ಧನಹಾನಿಕರ.

## ವಿವಾಹಸಿದ್ಧತೆ - ನಿಶ್ಚಿತಾರ್ಥ

ವಿವಾಹಕ್ಕೆ ಪೂರ್ವಭಾವಿ ಸಿದ್ಧತೆಗಳು ಸಾಮಾನ್ಯವಾಗಿ ಆರುವಿಧ.

1. ಹೆಣ್ಣು ನೋಡುವುದು, ಮನೆ ನೋಡುವುದು.
2. ನಿಶ್ಚಿತಾರ್ಥ, ನಿಶ್ಚಯ ತಾಂಬೂಲ ಅಥವಾ ಲಗ್ನಪತ್ರಿಕೆ.
3. ಪತ್ರಿಕೆ ಮುದ್ರಣ, ಆಮಂತ್ರಿಸುವಿಕೆ.
4. ಮಾಂಗಲ್ಯಸಿದ್ಧತೆ.
5. ನಾಂದೀ, ದೇವರ ಸಮಾರಾಧನೆ.
6. ಚಪ್ಪರದ ಪೂಜೆ, ಮಂಟಪಪ್ರತಿಷ್ಠೆ, ಗೋಧಿಕಲ್ಲುಶಾಸ್ತ್ರ, ಹರಿದ್ರಾಧಿಷ್ಠಾತ್ರೀಪೂಜೆ.

'ಜಾತಕಘಟನೆ ಇದೆ' ಎಂದಾದೊಡನೆ ವರಪಕ್ಷೀಯರು ವಧೂಗೃಹಕ್ಕೆ ತಮ್ಮ ಕನ್ಯೆಯ ಬಗ್ಗೆ ನಾವು ಆಸಕ್ತರಾಗಿದ್ದೇವೆ. ಹೆಣ್ಣು ತೋರಿಸಬಹುದೇ? ಅಥವಾ ಹೆಣ್ಣು ನೋಡುವುದಕ್ಕೆ ಬರಬಹುದೇ? ಎಂದು ವಿಚಾರಿಸುತ್ತಾರೆ. ಉಡುಪಿ, ಧರ್ಮಸ್ಥಳ ಮುಂತಾದ ತೌಳವಪರಿಸರದಲ್ಲಿ ವರಪಕ್ಷದವರೇ ವಧೂಗೃಹಕ್ಕೆ ಹೋಗಿ ಕನ್ಯೆ ನೋಡಿ ಬರುತ್ತಾರೆ. ಬೇರೆಡೆ ವರನ ಮನೆಗೆ ಅಥವಾ ವರಪಕ್ಷೀಯರು ಗೊತ್ತುಪಡಿಸಿದ ನಿಗದಿತ ಸ್ಥಳಕ್ಕೆ ವಧೂವನ್ನು ಕರೆತಂದು ತೋರಿಸುತ್ತಾರೆ. ಈ ಸಂದರ್ಭದಲ್ಲಿ ವಧುವಿನ ಮೂಲಕ ಒಂದಾದರೂ ಪದ್ಯ ಹೇಳಿಸುವುದು ಸಾಮಾನ್ಯ ಪದ್ಧತಿ. ಆಕೆಯ ಸ್ವರವನ್ನು ಮಾತ್ರವಲ್ಲದೆ ವ್ಯಕ್ತಿತ್ವವನ್ನೂ ಆದರಿಂದ ಅರ್ಥೈಸಿಕೊಳ್ಳುವುದು ಶಕ್ಯವಾಗುತ್ತದೆ. ಇದೇ **ಕನ್ಯಾಪರೀಕ್ಷಣ.**

ಇಂದು ಇದು ಹಾಡು ಹೇಳಿಸುವಲ್ಲಿ ಮುಗಿಯುತ್ತದೆ. ಹಿಂದಿನ ಕಾಲದಲ್ಲಿದ್ದ ಪದ್ಧತಿಯೊಂದನ್ನು ಭಾರದ್ವಾಜಗೃಹ್ಯಸೂತ್ರವು ಹೇಳಿದೆ. -- ''ದೇವರ ಮುಂದೆ ನಾಲ್ಕು ಮಣ್ಣಿನ ಮುದ್ದೆಗಳನ್ನು ಇಡಬೇಕು. ಒಂದು ಯಜ್ಞವೇದಿಕೆಯ ಮಣ್ಣು; ಮತ್ತೊಂದು ಗೋವಾಸಸ್ಥಳದ ಮಣ್ಣು; ಮಗದೊಂದು ನೇಗಿಲಿನಿಂದ ಸೀಳಿದ ಗದ್ದೆಯ ಮಣ್ಣು; ಇನ್ನೊಂದು ಸ್ಮಶಾನದ ಮಣ್ಣು. ಈ ವೇದಿಲೋಷ್ಠ, ಗೋಮಯಲೋಷ್ಠ, ಸೀತಾ-ಲೋಷ್ಠ, ಸ್ಮಶಾನಲೋಷ್ಠಗಳಲ್ಲಿ ಒಂದನ್ನು ತೆಗೆದುಕೊಡುವಂತೆ ಕನ್ಯೆಗೆ ಹೇಳಬೇಕು. ಆಕೆ ವೇದಿಲೋಷ್ಠವನ್ನು ಮುಟ್ಟಿದರೆ ಅಧ್ಯಾಪಕನನ್ನೋ ಯಾಜ್ಞಿಕನನ್ನೋ ಹಡೆಯುತ್ತಾಳೆ. ಗೋಮಯಲೋಷ್ಠವನ್ನಾದರೆ ಬಹಪಶುಸಂಪತ್ತಿಯುಳ್ಳವನನ್ನು, ಸೀತಾಲೋಷ್ಠ-ವನ್ನಾದರೆ ಕೃಷಿಭೂಮಿಯ ಅಧಿಪನನ್ನು ಹಡೆಯುತ್ತಾಳೆ. ಸ್ಮಶಾನಲೋಷ್ಠವನ್ನು ಮುಟ್ಟಿದರೆ ಆಕೆಯನ್ನು ವಿವಾಹವಾಗಕೂಡದು''.

ಇಂದಿಗೆ ಈ ತರಹದ ಪರೀಕ್ಷೆ ಕಾಲಬಾಧಿತ.

ವಧುವನ್ನು ನೋಡಿದನಂತರ ವರಪಕ್ಷದವರು ಅಲ್ಲಿಯೇ ತಮ್ಮ ಒಪ್ಪಿಗೆ ಇಲ್ಲವೇ ನಿರಾಕರಣೆಯನ್ನು ತಿಳಿಸುತ್ತಾರೆ. ಕೆಲವೊಮ್ಮೆ ಕೆಲ ಕಾಲಾವಕಾಶವನ್ನೂ ತೆಗೆದುಕೊಳ್ಳುವುದಿದೆ.

ವರಪಕ್ಷದವರು ಒಪ್ಪಿದರೂ ವಧೂಪಕ್ಷದವರು ನಿರಾಕರಿಸುವುದಕ್ಕೆ ಅವಕಾಶವಿದೆ. ವಧೂವರರಿಗೆ ಪರಸ್ಪರ ಒಪ್ಪಿಗೆಯಾಗಿದ್ದಲ್ಲಿ ಬಹುಮಟ್ಟಿಗೆ ಎರಡೂ ಕಡೆಯಿಂದ ಒಪ್ಪಿಗೆ ಬಂದಂತೆಯೇ.

ಪರಸ್ಪರ ಒಪ್ಪಿಗೆಯಾದ ಮೇಲೆ ವಧೂಸಂಬಂಧಿಗಳು ವರನ ಮನೆ ನೋಡುವ ಸಂಪ್ರದಾಯ ಉಡುಪಿ ಪರಿಸರದಲ್ಲಿದೆ. ಇದಕ್ಕೆ 'ಮನೆ ನೋಡುವುದು' ಎಂದು ಹೆಸರು. ನಮ್ಮ ಹುಡುಗಿ ಮುಂದೆ ವಾಸಿಸಬೇಕಾಗಿರುವ ಪರಿಸರ, ಮನೆ, ಮನೆಯವರು ಹೇಗಿದ್ದಾರೆ? ಎಂಬ ವಿಷಯವನ್ನು ತಿಳಿಯುವುದು ಇದರ ಉದ್ದೇಶ. ಆಧುನಿಕ ಕಾಲದಲ್ಲಿ ವರ ಯಾವುದೋ ಪಟ್ಟಣದಲ್ಲಿ ಕೆಲಸದಲ್ಲಿದ್ದು ಬೇರೆ ಮನೆ ಮಾಡಿದ್ದರೂ ವರನ ತಂದೆ ತಾಯಿಯವರು ಇರುವ ಮೂಲ ಮನೆಗೇ ಹೋಗಿ ಬರುವ ಸಂಪ್ರದಾಯ ಇಂದಿಗೂ ನಡೆಯುತ್ತಿದೆ. ಹೀಗೆ ವರನ ಮನೆಗೆ ಬಂದಾಗಲೇ ಮುಂದಿನ ಕಾರ್ಯಗಳ ಬಗ್ಗೆ, ನಿಶ್ಚಿತಾರ್ಥದ ದಿನದ ಬಗ್ಗೆ ಮಾತುಕತೆಯಾಗಿ ದಿನ ನಿರ್ಧರಿಸಲ್ಪಡುತ್ತದೆ.

ಘಟ್ಟದ ಮೇಲಿನ ಸಂಪ್ರದಾಯದಲ್ಲಿ ವರಗೃಹದರ್ಶನವೆಂಬ ಈ ಕ್ರಮವಿಲ್ಲ. ಇಲ್ಲಿ ಕನ್ಯೆಯನ್ನು ತೋರಿಸುವಾಗಲೇ ವರನ ಮನೆ ನೋಡಿ ಆಗಿರುತ್ತದೆ. ಕನ್ಯೆಯ ಮನೆಗೆ

ವರನ ಪಕ್ಷದವರು ಹೋಗಿ ಬರುವ ಕ್ರಮ ಕೆಲವೆಡೆ ಮಾತ್ರ ಇದೆ. ಆಗಲೇ ಲಗ್ನಪತ್ರಿಕೆಯ ನಿಶ್ಚಿತಾರ್ಥದ ದಿನವೂ ನಿರ್ಧರಿಸಲ್ಪಡುತ್ತದೆ.

## ನಿಶ್ಚಿತಾರ್ಥ

ಈಗ ಹೇಳಿದ ವಧೂದರ್ಶನ, ವರಗೃಹಾವಲೋಕನ ಮತ್ತು ಈಗ ಹೇಳಲಿರುವ 'ನಿಶ್ಚಯತಾಂಬೂಲ' ಎಂಬ ಪ್ರಕ್ರಿಯೆಗಳ ಬಗೆಗೆ ಪೌರೋಹಿತ್ಯ ಗ್ರಂಥಗಳಲ್ಲಾಗಲೀ, ಧರ್ಮಶಾಸ್ತ್ರಗಳಲ್ಲಾಗಲೀ ಚಕಾರವಿಲ್ಲ. ಇವೆಲ್ಲ ಸಂಪ್ರದಾಯದ ವಿಧಿಗಳು. ವಿವಾಹವೆಂಬುದು ಹತ್ತು ಹಲವು ಸಂಪ್ರದಾಯಗಳ ಮೂಟೆ. ಇಂದಿನ ನಿಶ್ಚಯ ತಾಂಬೂಲಕ್ಕೆ ಸದೃಶವಾದ ಅನುಷ್ಠಾನದ ಬಗೆಗೆ ಭವಿಷ್ಯೋತ್ತರಪುರಾಣದ ವೇಂಕಟೇಶ ಮಾಹಾತ್ಮ್ಯೆಯಲ್ಲಿ ಮಾಹಿತಿ ದೊರೆಯುತ್ತದೆ. ಲಗ್ನವನ್ನು ನಿಶ್ಚಯಿಸಿ ವಿವಾಹದ ಆಮಂತ್ರಣಪತ್ರಿಕೆಯನ್ನು ಸಿದ್ಧಪಡಿಸುವ ಸಂಪ್ರದಾಯವನ್ನು ಲಗ್ನಪತ್ರಿಕೆಯ ಶಾಸ್ತ್ರ, ನಿಶ್ಚಯತಾಂಬೂಲ, ನಿಶ್ಚಿತಾರ್ಥ ಎಂದೆಲ್ಲಾ ವ್ಯವಹರಿಸಲಾಗುತ್ತಿದೆ.

ಒಂದು ಕಾಲವಿತ್ತು. ವರನಾಗಲೀ ವರನ ತಂದೆತಾಯಿಯಾಗಲೀ ನಿಶ್ಚಿತಾರ್ಥದಲ್ಲಿ ಭಾಗವಹಿಸುತ್ತಿರಲಿಲ್ಲ. ಜ್ಯೇಷ್ಠರೂ, ಶ್ರೇಷ್ಠರೂ ಆದ ನಾಲ್ವರುವಿಪ್ರರನ್ನು ಪ್ರಾರ್ಥಿಸು-ತ್ತಿದ್ದರು. 'ದಯವಿಟ್ಟು ತಾವು ಈ ಕನ್ಯೆಯನ್ನು ನಮ್ಮ ಸುತನಿಗೆ ನಿಶ್ಚಯಿಸಿ ಕೊಂಡು ಬನ್ನಿ' ಎಂದು. ಆ ನಾಲ್ಕುಮಂದಿ ಷಟ್ಪುಚ್ಛ ಕಚ್ಚಧರಿಸಿ ಉತ್ತರೀಯ ಬಿಗಿದು ಮುಂಡಾಸು ಧರಿಸಿ ಮುತ್ತೈದೆಯನ್ನು ಮುಂದಿಟ್ಟುಕೊಂಡು ವಾದ್ಯದವರೊಂದಿಗೆ ವಧೂಗೃಹಕ್ಕೆ ಬರುತ್ತಿದ್ದರು. ವಧುವಿಗೆ ವರಪಕ್ಷದ ವಸ್ತ್ರಾಭರಣಗಳನ್ನು ಕೊಟ್ಟು ಆಶೀರ್ವದಿಸಿ, ಮದುವೆ ನಿಶ್ಚಯಿಸಿ ಹೊರಡುತ್ತಿದ್ದರು. '**ವರಪಕ್ಷಪ್ರಹಿತಾಃ ಚತ್ವಾರೋಽಷ್ಟೌ ವಾ ಬ್ರಾಹ್ಮಣಾಃ ಪ್ರಶಸ್ತವೇಷಾಃ ...**' ಎಂದಾರಂಭವಾಗುವ ವಿವಾಹಪ್ರಯೋಗದಲ್ಲಿ ಇಷ್ಟೇ ನಿಶ್ಚಿತಾರ್ಥ.

ಈಚಿನ ದಿನಗಳಲ್ಲಿ ಈ ನಿಶ್ಚಿತಾರ್ಥವೂ ಮದುವೆಯಷ್ಟೇ ಗೌಜು, ಗೊಂದಲಗಳಿಂದ ನಡೆಯುವುದನ್ನು ಕಾಣುತ್ತೇವೆ. ಸಮಾಜದಲ್ಲಿ ಶ್ರೀಮಂತಿಕೆ ಇದಕ್ಕೆ ಕಾರಣ, ಅಥವಾ ಕಾಲ ಕಾರಣ.

ವರಪಕ್ಷದವರು ಕೈಕಾಲು ತೊಳೆದು ಶುದ್ಧರಾಗಿ ತಾವು ತಂದ ಹೂವು, ಹಣ್ಣುಗಳನ್ನು ದೇವರ ಮುಂದೆ ಇಟ್ಟು ವಿವಾಹದ ನಿರ್ವಿಘ್ನತೆಗಾಗಿ ವಧೂಪಕ್ಷದವರೊಂದಿಗೆ ಕುಲದೇವತೆಯನ್ನು ಪ್ರಾರ್ಥಿಸುತ್ತಾರೆ. ದೇವರನ್ನು ನಮಿಸಿ ಮನೆಯಲ್ಲಿ ಗಾಳಿಬೆಳಕಿರುವ

ವಿಶಾಲಪ್ರದೇಶದಲ್ಲಿ ಕುಳಿತುಕೊಂಡು ಮದುವೆಯ ಬಗೆಗೆ ಮಾತುಕತೆ ನಡೆಸುತ್ತಾರೆ. ವಾಕ್ಚತುರನೋರ್ವ ಪರಸ್ಪರ ಪರಿಚಯ ಮಾಡಿಕೊಡುತ್ತಾನೆ. ವಧೂಪಿತೃ 'ಸ್ವಾಗತಮ್' ಎನ್ನುತ್ತಾನೆ. ವರನ ಕಡೆಯವರು 'ಕನ್ಯಾರ್ಥಿನೋ ವಯಮ್' ಎನ್ನುತ್ತಾರೆ. ವಧೂಪಿತೃ 'ಸುಸ್ವಾಗತಮ್' ಎನ್ನುತ್ತಾನೆ. ಈಗಾಗಲೇ ಈ ವರನಿಗೆ ಈ ವಧುವೆಂದು ನಿಶ್ಚಯವಾಗಿದೆ. ಇನ್ನು ಮದುವೆಗೆ ದಿನ ನಿಶ್ಚಯ, ಮುಹೂರ್ತನಿಶ್ಚಯ, ಸ್ಥಳನಿಶ್ಚಯ, ಕೊಂಡು-ಕೊಳ್ಳುವ ನಿಶ್ಚಯಗಳು ಆಗಬೇಕಿವೆ. ಈ ಬಗ್ಗೆ ಪರಸ್ಪರ ಅನುಕೂಲತೆಗಳನ್ನು ಪರಿಗಣಿಸಿ ಮಾತುಕತೆಯ ಮೂಲಕ ಪುರೋಹಿತರ ಮುಂದಾಳುತ್ವದಲ್ಲಿ ಮದುವೆಯ ದಿನವನ್ನು ಗೊತ್ತು ಪಡಿಸಲಾಗುತ್ತದೆ.

ಇಂದು ಕೆಳಕಂಡವಿಷಯಗಳು ನಿರ್ಣೀತವಾಗುತ್ತವೆ.

1. **ವಿವಾಹದ ದಿನ ಹಾಗೂ ಮುಹೂರ್ತ** – ಸಂಬಂಧಿಗಳೆಲ್ಲಾ ಸೇರಿರುವುದರಿಂದ ಪರಸ್ಪರ ವಿಚಾರಿಸಿಕೊಂಡು, ಸಂಬಂಧಿಗಳ ಸಮಾರಂಭವೇನಾದರೂ ಈ ಹಿಂದೆಯೇ ನಿಶ್ಚಿತವಾಗಿದ್ದರೆ, ಅಂತಹ ದಿನವನ್ನು ಬಿಟ್ಟು ಬೇರೆ ದಿನವನ್ನು ನಿಶ್ಚಯಿಸ - ಬಹುದಾಗಿದೆ. ವಧೂವಧೂಮಾತೃಗಳ ಮಾಸಿಕಧರ್ಮದ ದಿನವನ್ನು ಪರಿತ್ಯಜಿಸಬೇಕು. ತಂದೆತಾಯಿಯರ ಶ್ರಾದ್ಧಕರ್ಮವನ್ನು ಮುಂದಿಟ್ಟುಕೊಂಡು ಆ ಪಕ್ಷದಲ್ಲಿ ವಿವಾಹ ಕೂಡದು. ಉದಾಹರಣೆಗೆ ಕೃಷ್ಣಪಕ್ಷದ ಷಷ್ಠಿಯಂದು ಶ್ರಾದ್ಧತಿಥಿಯಿದ್ದರೆ ಆ ಪ್ರತಿಪತ್ ಆರಂಭಿಸಿ ಷಷ್ಠಿಯ ತನಕದ ದಿನಗಳು ನಿಷಿದ್ಧ. ಹುಣ್ಣಿಮೆಯು ಶ್ರಾದ್ಧತಿಥಿಯಾಗಿದ್ದರೆ ಆ ಪಕ್ಷವನ್ನೇ ಪೂರ್ತಿಯಾಗಿ ಬಿಡಬೇಕು.

2. **ಉಪಚಾರ, ಮರ್ಯಾದೆಯ ನಿಶ್ಚಯ** - ಮದುವೆಯಂದು ವಧೂಪಕ್ಷದಿಂದ ವರೋಪಚಾರವಾಗಬೇಕು. ಇದಕ್ಕೆ 'ಮಧುಪರ್ಕ'ವೆಂದು ಹೆಸರು. ಈ ಸಮಯದಲ್ಲಿ ವರನಿಗೆ ವಸ್ತ್ರ, ತಂಬಿಗೆ, ಹರಿವಾಣ, ಲೋಟ ಇತ್ಯಾದಿಗಳನ್ನು ನೀಡಬೇಕಿದೆ. ಇದರಲ್ಲಿ ಇಂಥದೇ ಕೊಡಬೇಕೆಂಬ ಅಪೇಕ್ಷೆ ವರನ ಪಕ್ಷಕ್ಕೆ ಇದ್ದರೆ ಅದನ್ನೂ ಇಲ್ಲೇ ನಿಶ್ಚಯಿಸಿಕೊಳ್ಳಬೇಕು. ಲಾಜಹೋಮಕ್ಕೆ ಅಗ್ನಿ ತಂದು ಕೊಡುವ ವಧುವಿನ ಮಾತೃವಿಗೆ ಒಂದು ಸೀರೆಯನ್ನು ಕೊಡುವುದಕ್ಕೆ **'ಅಗ್ನಿಮರ್ಯಾದೆ'** ಎಂದು ಹೆಸರು. ಈ ಸಂಪ್ರದಾಯ ಕೆಲವೆಡೆ ಮಾತ್ರ .

ಲಾಜಹೋಮದ ಹೊತ್ತು ಭತ್ತದ ಅರಳು ಹಿಡಿದು ನಿಲ್ಲುವ ಅಧಿಕಾರ ವಧುವಿನ ತಮ್ಮನಿಗೆ, ಇಲ್ಲವೇ ಆ ಸ್ಥಾನದಲ್ಲಿ ಬರುವವನಿಗೆ. ವರಪಕ್ಷದಿಂದ ವಸ್ತ್ರರೂಪದ ಮರ್ಯಾದೆ ಈತನಿಗೆ ಸಲ್ಲುತ್ತದೆ. ಇದಕ್ಕೆ **'ಲಾಜಮರ್ಯಾದೆ'** ಎಂದು ಹೆಸರು.

**'ಹಸೆಮಣೆ ಸೀರೆ'** ಎಂಬ ಹೆಸರಿನಿಂದ ವರನ ಪಕ್ಷದವರೂ ಒಂದು ಸೀರೆಯನ್ನು ವಧುವಿಗೆ ಕೊಡುವುದಿದೆ. ಈ ಎಲ್ಲಾ ಪ್ರಕ್ರಿಯೆಗಳು ಅನಿವಾರ್ಯವಲ್ಲ. ಆರ್ಥಿಕ ಅನುಕೂಲತೆ ಇಲ್ಲದಾಗ ಇವನ್ನು ಬಿಟ್ಟು ಬಿಡಬಹುದು. ಆ ಬಗ್ಗೆ ಇಲ್ಲಿ ಮಾತುಕತೆ ನಡೆಯುತ್ತದೆ.

4. **ನಾಂದೀ -** ವಿವಾಹಕ್ಕೆ ಪೂರ್ವಭಾವಿಯಾಗಿ ಹತ್ತುದಿನದ ಮುಂಚೆಯೂ ನಾಂದೀ ಸಮಾರಾಧನೆ ಮಾಡಬಹುದು. ವಧೂ ಹಾಗು ವರಪಕ್ಷದಲ್ಲಿ ಒಂದೇ ದಿನ ನಾಂದಿ ಇಡುವುದು ಶ್ರೇಷ್ಠ. ಬೇರೆ ಬೇರೆ ದಿನ ನಾಂದಿ ಇಟ್ಟಲ್ಲಿ ಆಶೌಚಾದಿಗಳ ನಿಮಿತ್ತ ಕೆಲವು ಸಮಸ್ಯೆಗಳು ಉದ್ಭವಿಸುವ ಸಾಧ್ಯತೆ ಇದೆ. ಆದ್ದರಿಂದ ಉಭಯರಿಗೂ ಅನುಕೂಲವಾಗುವ ಒಂದು ದಿನವು ನಾಂದಿಗಾಗಿ ನಿಶ್ಚಿತವಾಗಬೇಕು.

5. **ಮಾಂಗಲ್ಯಸಿದ್ಧತೆ -** ಮಾಂಗಲ್ಯವನ್ನು ಸಿದ್ಧಗೊಳಿಸುವ ಬಗ್ಗೆ ಒಂದು ದಿನ ನೋಡಲಾಗುತ್ತದೆ. ಆ ದಿನ ಬಂಗಾರ ಕರಗಿಸಿ ಮಾಂಗಲ್ಯವನ್ನು ಕೊಂಡುಕೊಳ್ಳಬೇಕು. ವಧೂ ಹಾಗೂ ವರಪಕ್ಷದಿಂದ ಪ್ರತ್ಯೇಕ ತಾಳಿ ಇರಬೇಕು. ಇಂದಿನ ದಿನಗಳಲ್ಲಿ ವಧೂಪಕ್ಷದವರೇ ಎರಡೂ ತಾಳಿಗಳನ್ನು ನಿರ್ಮಿಸುತ್ತಾರೆ. ಆದರಲ್ಲೊಂದು ತಾಳಿ - ಬಂಗಾರದ ಗುಂಡುಗಳ ವೆಚ್ಚವನ್ನು ವರಪಕ್ಷದವರು ಭರಿಸುವ ಸಂಪ್ರದಾಯ ಇಂದಿಗೂ ದಕ್ಷಿಣಕನ್ನಡದಲ್ಲಿದೆ.

6. ವರನ ಕಡೆಯಿಂದ ವಿವಾಹದಂದು ಎಷ್ಟು ಜನರು ಬರಲಿದ್ದಾರೆ? ಎಂಬ ಅಂದಾಜು ವ್ಯವಸ್ಥೆಯ ದೃಷ್ಟಿಯಿಂದ ವಧೂಕಡೆಯವರಿಗೆ ಇಂದು ತಿಳಿಯಬೇಕು. ಅಂದಿನ ಪ್ರಾತಃಕಾಲದ ಉಪಾಹಾರ, ಪಾನೀಯ, ರಾತ್ರಿ ಉಳಿದುಕೊಳ್ಳುವವರ ಅಂದಾಜು ಸಂಖ್ಯೆ ಇತ್ಯಾದಿಗಳ ಬಗೆಗೆ ತಿಳಿದುಕೊಳ್ಳುವ ಅನಿವಾರ್ಯತೆ ಒಂದು ಕಾಲದಲ್ಲಿತ್ತು. ಇಂದಿನ ಕಲ್ಯಾಣಮಂಟಪಗಳ ಮದುವೆಯಲ್ಲಿ ಇವೆಲ್ಲಾ ಅರ್ಥ ಕಳೆದುಕೊಂಡಿದೆ. ಹಾಗಿದ್ದರೂ ಈ ಬಗ್ಗೆ ಸಾಂಪ್ರದಾಯಿಕಮಾತುಕತೆ ಇಲ್ಲಿ ನಡೆಯುತ್ತದೆ.

7. ಬ್ರಾಹ್ಮಣರಿಗೆ ಕೊಡುವ ದಕ್ಷಿಣೆಯ ವಿಷಯದಲ್ಲಿಯೂ ವಿಚಾರ ನಡೆಯುತ್ತದೆ. ''**ಸೂರ್ಯಾವರ್ಗ**''ವನ್ನು ಪಾರಾಯಣ ಮಾಡಿದ ವಿಪ್ರರಿಗೆ ದಕ್ಷಿಣೆ ಕೊಡಬೇಕು. ಭೋಜನಕಾಲದಲ್ಲಿ ಅನ್ನದಾನ ದಕ್ಷಿಣೆ ನೀಡಬೇಕು. ಇಲ್ಲಿ ಉಭಯಪಕ್ಷದಿಂದಲೂ ಪ್ರತ್ಯೇಕ ಕೊಡುವ ದಕ್ಷಿಣೆಗಳಲ್ಲಿ ವರನ ಪಕ್ಷದ ದಕ್ಷಿಣೆ ವಧೂಪಕ್ಷದ ದಕ್ಷಿಣೆಗಿಂತ ಅಧಿಕವಾಗಿರತಕ್ಕದ್ದು ಎಂಬುದು ಒಂದು ನಡವಳಿಕೆ. ಈ ಬಗ್ಗೆ 'ನೀವು ಹತ್ತು ಕೊಡಿ. ನಾವು ಇಪ್ಪತ್ತು ಕೊಡುತ್ತೇವೆ' ಎಂಬ ರೀತಿಯ ನಿಶ್ಚಯ ಇಲ್ಲಿ ನಡೆಯುತ್ತದೆ.

## ಲಗ್ನಪತ್ರಿಕೆಯ ಒಕ್ಕಣೆ

ಕುಲದೇವತೆಗೆ ಸಂಬಂಧಿಸಿದ ಶ್ಲೋಕವನ್ನು ಬರೆಯುವುದು. ಅಥವಾ 'ಶ್ರೀಕುಲ-ದೇವತಾ ಪ್ರಸನ್ನಾ' ಎಂದಷ್ಟೇ ಬರೆದರೂ ಸಾಕು. ಇಲ್ಲಿ ದೇವತಾಶಬ್ದವು ಸ್ತ್ರೀಲಿಂಗ. ಹಾಗಾಗಿ ಪ್ರಸನ್ನಾ ಎಂಬ ದೀರ್ಘಾಂತವಾಗಿಯೇ ಬರೆಯಬೇಕು. 'ಪ್ರಸನ್ನಃ' ಎಂಬ ಲೇಖನ ತಪ್ಪು. 'ಶ್ರೀಕುಲದೇವತಾ ಪ್ರಸೀದತು' ಎಂದೂ ಬರೆಯಬಹುದು.

ಪತ್ರಿಕೆಯ ಬಲಭಾಗದಲ್ಲಿ ನಿಶ್ಚಿತಾರ್ಥದ ದಿನದ ದಿನಾಂಕವನ್ನು ನಿರ್ದೇಶಿಸಬೇಕು.

ಮುಂದಿನ ಒಕ್ಕಣೆಯಲ್ಲಿ 'ಪ್ರಿಯರೇ' ಎಂದು ಬರೆದು ಕನ್ಯಾಪಕ್ಷದವರು ವರಪಕ್ಷದ ಹಿರಿಯರನ್ನು ಸಂಬೋಧಿಸಿ ಈ ರೀತಿ ಬರೆಯುತ್ತಾರೆ.

ಈ ಸಂವತ್ಸರದ ಇಂತಹ ಶುಭದಿನದಂದು ಇಷ್ಟು ಘಂಟೆಗೆ ಸರಿಯಾಗಿ ಒದಗುವ ಈ ಶುಭಮುಹೂರ್ತದಲ್ಲಿ ತಮಗೆ ಈ ರೀತಿಯಿಂದ ಸಂಬಂಧಿಯಾದ ಚಿರಂಜೀವಿಯಾದ (ಚಿ) ಈ ಹೆಸರಿನ ವರನಿಗೆ ನಮ್ಮ ಈ ರೀತಿಯಾದ ಸಂಬಂಧಿನಿಯಾದ ಚಿರಂಜೀವಿನಿ ಸೌಭಾಗ್ಯವತಿಯಾದ (ಚಿ.ಸೌ.) ಈ ಹೆಸರಿನ ಕನ್ನಿಕೆಯನ್ನು ಕೊಟ್ಟು ವಿವಾಹ ಮಾಡಬೇಕೆಂದು ದೇವತಾಸನ್ನಿಧಾನದಲ್ಲಿ ಗುರುಹಿರಿಯರು ನಿಶ್ಚಯಿಸಿರುತ್ತೇವೆ. ಈ ಶುಭಮಹೋತ್ಸವವು ಇಂತಹ ಊರಿನ ಇಂತಹ ಸ್ಥಳದಲ್ಲಿ ನಡೆಯಲಿರುವುದರಿಂದ ತಾವು ತಮ್ಮ ಬಂಧುಮಿತ್ರರೆಲ್ಲರಿಂದ ಜೊತೆಗೂಡಿ ಬಂದು ವರನಿಗೋಸ್ಕರ ನಾವಿತ್ತ ಕನ್ನಿಕೆಯನ್ನು ಒಪ್ಪಿಸಿಕೊಂಡು, ನಮ್ಮ ಯಥೋಚಿತಸತ್ಕಾರವನ್ನು ಸ್ವೀಕರಿಸಿ, ನಮ್ಮನ್ನು ಕೃತಾರ್ಥರನ್ನಾಗಿಸಬೇಕಾಗಿ ಸವಿನಯ ಪ್ರಾರ್ಥನೆ.

ಕೆಳಗೆ ಎಡಭಾಗದಲ್ಲಿ ತಮ್ಮ ಮನೆಯ ವಿಳಾಸವನ್ನು ಬರೆದು, ಬಲಭಾಗದಲ್ಲಿ 'ಇಂತು ತಮ್ಮವ' ಎಂದು ಬರೆದು ಅದರ ಕೆಳಗೆ ಸಹಿಮಾಡಿ, ಮಧ್ಯೆ 'ಶುಭಮಸ್ತು' ಎಂದು ಬರೆದಾಗ ಪತ್ರಿಕೆ ಸನ್ನದ್ಧ.

ವರನ ಕಡೆಯವರು ಬರೆಯುವಾಗಲೂ ಇದೇ ಕ್ರಮವಾದರೂ ಸ್ವಲ್ಪ ವ್ಯತ್ಯಾಸವಿದೆ. ಇವರು ಕನ್ಯಾಪಕ್ಷದ ಹಿರಿಯರನ್ನು ಸಂಬೋಧಿಸಿ ಬರೆಯುತ್ತಾರೆ. ಈ ವರನು ಇಂತಹ ಈ ವಧುವನ್ನು ಪಾಣಿಗ್ರಹಣ ಮಾಡಿಕೊಳ್ಳುವುದಾಗಿ ಗುರುಹಿರಿಯರಿದ್ದು ನಿಶ್ಚಯಿಸಲಾಗಿದೆ. ಇಂತಹ ಸ್ಥಳದಲ್ಲಿ ನಡೆಯಲಿರುವ ಈ ಸಮಾರಂಭಕ್ಕೆ ತಾವು ಬಂಧು ಮಿತ್ರರೊಡನೆ ಆಗಮಿಸಿ ಕನ್ಯಾದಾನವಿತ್ತು ಕಾರ್ಯಕ್ರಮವನ್ನು ಚೆಂದಗಾಣಿಸಿಕೊಟ್ಟು ನಮ್ಮನ್ನು ಕೃತಾರ್ಥರನ್ನಾಗಿಸಬೇಕಾಗಿ ಅಪೇಕ್ಷಿಸುತ್ತೇವೆ ಎಂದು ಬರೆದು ಮೇಲೆ ಹೇಳಿದಂತೆಯೇ ಸಹಿಹಾಕಿ ಮುಗಿಸುವುದು.

ಕನ್ಯಾಪಕ್ಷದಿಂದ ಬರೆದ ಪತ್ರಿಕೆಯಲ್ಲಿ ಕನ್ಯೆಯ ಹೆಸರು ಮೊದಲಿದ್ದು, ವರನ ಹೆಸರು ನಂತರದಲ್ಲಿ ಬರೆಯಬೇಕೆಂದೂ; ವರಪಕ್ಷದಿಂದ ಬರೆದುದರಲ್ಲಿ ವಿಪರೀತ ಕ್ರಮವೆಂದೂ ಕೆಲವರ ಸಂಪ್ರದಾಯವಿದೆ.

ವರನ ಹೆಸರಿನ ಹಿಂದೆ 'ಚಿ' ಎಂದೂ, ವಧುವಿನ ಹೆಸರಿನ ಹಿಂದೆ 'ಚಿ.ಸೌ.' ಎಂದಷ್ಟೇ ಸೇರಿಸುವುದಿದೆ. ಚಿರಂಜೀವಿ ಹಾಗೂ ಚಿರಂಜೀವಿನೀ ಸೌಭಾಗ್ಯವತೀ ಎಂಬುದರ ಸಂಕ್ಷಿಪ್ತರೂಪ. ಕೆಲವೆಡೆ ಹ.ಕುಂ.ಸೌ. ಎಂದು ಬರೆಯುವುದಿದೆ. ಹರಿದ್ರಾ ಕುಂಕುಮಸೌಭಾಗ್ಯವತೀ ಎಂದರ್ಥ.

ಲಗ್ನಪತ್ರಿಕೆಯನ್ನು ಪೂಜಿಸಿ ಫಲತಾಂಬೂಲದೊಂದಿಗೆ ತಾನು ಬರೆದುದನ್ನು ವರಪಕ್ಷದ ಹಿರಿಯರಿಗಿತ್ತು ವಧೂಪಿತೃ ಹೇಳುತ್ತಾನೆ -

**ಮಯಾ ದತ್ತಾ ತ್ವಿಯಂ ಕನ್ಯಾ ಪುತ್ರಾರ್ಥಂ ಸ್ವೀಕೃತಾ ತ್ವಯಾ ।**
**ಕನ್ಯಾವಲೋಕನವಿಧೌ ನಿಶ್ಚಿತಸ್ತ್ವಂ ಸುಖೀ ಭವ ॥**

'ನಾನು ಈ ಕನ್ಯೆಯನ್ನು ನಿನ್ನ ಪುತ್ರನಿಗಾಗಿ ಮಾತಿನಿಂದ ಕೊಟ್ಟಿದ್ದೇನೆ. ನೀನೂ ಮಾತಿನಿಂದ ಪುತ್ರನಿಗಾಗಿ ಸ್ವೀಕರಿಸಿದ್ದಿ. ಹಾಗಾಗಿ ಈ ಕನ್ಯಾನಿಶ್ಚಯದಿಂದ ಕ್ಲೇಶವಿಲ್ಲದೆ ಸುಖಿಯಾಗು'.

ವರ ಪಿತೃವೂ ಕೂಡ ತಾನು ಬರೆದ ಪತ್ರಿಕೆಯನ್ನು ಕೊಟ್ಟು ಹೇಳುತ್ತಾನೆ -

**ತ್ವಯಾ ದತ್ತಾ ತ್ವಿಯಂ ಕನ್ಯಾ ಪುತ್ರಾರ್ಥಂ ಸ್ವೀಕೃತಾ ಮಯಾ ।**
**ವರಾವಲೋಕನವಿಧೌ ನಿಶ್ಚಿತಸ್ತ್ವಂ ಸುಖೀ ಭವ ॥**

'ನೀನು ಕನ್ಯೆಯಿತ್ತಿ. ನಾನು ಪುತ್ರನಿಗಾಗಿ ಸ್ವೀಕರಿಸಿ ವಾಗ್ದಾನ ಮಾಡಿದ್ದೇನೆ. ವರ ನಿಶ್ಚಯವಾಗಿದೆ. ಟೆನ್ಷನ್ ಬೇಡ. ಸುಖಿಯಾಗು'.

ಈಗ ವರಪಕ್ಷೀಯರು ವಧುವಿಗೆ ಸೀರೆಯನ್ನು ಕೊಡುತ್ತಾರೆ. ಆಕೆ ಅವುಗಳಿಂದ ಅಲಂಕೃತಳಾಗಿ ಶಚಿಯನ್ನು ಪೂಜಿಸಿ, ಹಿರಿಯರನ್ನೆಲ್ಲಾ ನಮಸ್ಕರಿಸುತ್ತಾಳೆ. ವೇದವಿದರಾದ ಬ್ರಾಹ್ಮಣರು ಸೌಭಾಗ್ಯಮಂತ್ರಗಳನ್ನು ಹೇಳಿ ಆಕೆಯನ್ನು ಆಶೀರ್ವದಿಸುತ್ತಾರೆ.

ಅಲ್ಪ ಉಪಾಹಾರ ಇಲ್ಲವೇ ಭೋಜನದೊಂದಿಗೆ ನಿಶ್ಚಿತಾರ್ಥಕಾರ್ಯಕ್ರಮವು ಮುಗಿಯುತ್ತದೆ.

ಅದೊಂದು ಕಾಲ. ಲಾಜಹೋಮವಾಗುವ ತನಕ ವರನ ತಂದೆ ತಾಯಿ ವಧೂ-ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಲಾಜಹೋಮವಾದ ಒಡನೆ ಕನ್ಯಾ ಮಾತಾಪಿತೃ-

ಗಳು ಕೈಯ್ಯಲ್ಲಿ ತಾಂಬೂಲ ಹಿಡಿದು ವರನ ಮಾತಾಪಿತೃಗಳಲ್ಲಿ ಬಂದು ''ಅಡಿಗೆ ಸಿದ್ಧವಾಗಿ ನೈವೇದ್ಯವಾಗಿದೆ. ವೈಶ್ವದೇವ ನಡೆಸಿಕೊಡಬೇಕು'' ಎಂದು ಪ್ರಾರ್ಥಿಸಿ ವೈಶ್ವದೇವ ತಾಂಬೂಲವನ್ನು ಕೊಡುತ್ತಾರೆ. ಆಗ ವರಪಿತೃ ಅನ್ನದಿಂದ ವೈಶ್ವದೇವವನ್ನು ಮಾಡಿ ಅಲ್ಲಿಂದ ಮುಂದೆ ನಮ್ಮಲ್ಲಿ ಅನ್ನಸಂಬಂಧವೇರ್ಪಟ್ಟಿದೆ ಎಂದು ಭಾವಿಸಿ ಊಟ ಮಾಡುತ್ತಿದ್ದರು. ಆದ್ದರಿಂದ ನಿಶ್ಚಿತಾರ್ಥದ ದಿನ ಊಟ ಮಾಡುವುದು ಶಕ್ಯವಿರಲಿಲ್ಲ. ಆದರೆ ಇಂದಿನ ದಿನದಲ್ಲಿ 'ವೈಶ್ವದೇವವನ್ನು ಮಾಡದೆ ಊಟ ಮಾಡಬಾರದು' ಎಂಬುದನ್ನೂ ಅರಿಯದ ಬ್ರಾಹ್ಮಣರೇ ಬಹಳ ಮಂದಿ. 'ವೈಶ್ವದೇವ' ಎಂದರೇನು? ಎಂದು ಪ್ರಶ್ನಿಸುವಷ್ಟೂ ಅಂಧಕಾರವಿರುವ ಹಿರಿಯ ಮಂದಿಯೂ ನಮ್ಮಲ್ಲಿದ್ದಾರೆ. ಹಾಗಾಗಿ ನಿಶ್ಚಿತಾರ್ಥದ ದಿನವೇ ಭರ್ಜರಿ ಭೋಜನ ನಡೆದು ಬಿಡುತ್ತದೆ. ಕಾಲಾಯ ತಸ್ಮೈ ನಮಃ.

## ಮದುವೆಗೆ ಪೂರ್ವತಯಾರಿ

ನಿಶ್ಚಿತಾರ್ಥವಾದ ಮೇಲೆ ಮದುವೆಯ ಸಂಭ್ರಮ ಆರಂಭ. ಆಹ್ವಾನ ಪತ್ರಿಕೆಯ ಮುದ್ರಣ, ದೇವರ ಮುಂದೆ ಇಲ್ಲವೇ ಊರ ದೇವಸ್ಥಾನದಲ್ಲಿ ಮುದ್ರಿತಪತ್ರಿಕೆಗೆ ಪೂಜೆ, ಹಿರಿಯರಿಗೆ, ಧರ್ಮಪೀಠಗಳಿಗೆ ಆಹ್ವಾನಪತ್ರಿಕೆಯ ವಿತರಣೆ, ವಿಳಾಸ ಬರೆದು ಅಂಚೆಗೆ ತುಂಬುವ ಪ್ರಕ್ರಿಯೆ ಇವು ಗಂಡಸರ ಜವಾಬ್ದಾರಿಯಲ್ಲಿ ನಡೆದಿವೆ.

ಇತ್ತ ಹೆಂಗಸರು ಹಪ್ಪಳ, ಸಂಡಿಗೆ, ಉಪ್ಪಿನಕಾಯಿಗಳ ಸಿದ್ಧತೆಯನ್ನು ಮಾಡುತ್ತಾರೆ. ಯಾರಿಗೆ ಯಾವ ಸೀರೆ? ವಸ್ತ್ರ? ಎಂಬ ವ್ಯವಸ್ಥೆಯೂ ಇವರಿಂದ ನಡೆಯುತ್ತದೆ.

ವಿವಾಹವು ಕಲ್ಯಾಣಮಂಟಪದಲ್ಲಿ ನಡೆಯುವುದಾದರೂ ತಮ್ಮ ಮನೆಯ ಮುಂದೊಂದು ಚಿಕ್ಕದಾದ ಚೊಕ್ಕ ಚಪ್ಪರವನ್ನು ಸಿದ್ಧಗೊಳಿಸಿ ತೋರಣ ಕಟ್ಟಿದ್ದಾರೆ. ಚಪ್ಪರ ಮೇಲ್ಹಾವಣಿಗೆ ತೆಂಗಿನಗರಿಗಳನ್ನು ಪೂರ್ವ ಅಥವಾ ಉತ್ತರದ ಕಡೆ ತುದಿ ಬರುವಂತೆ ಹಾಕಿದ್ದಾರೆ. (ದಕ್ಷಿಣಕ್ಕೆ ತುದಿ ಇರುವಂತೆ ಹಾಕುವ ಚಪ್ಪರ ಮಸಣದ ಚಪ್ಪರ) ಬಾಳೆ ಕಂಬ ಕಟ್ಟಿ ಚಪ್ಪರವು ಅಲಂಕಾರಗೊಂಡಿದೆ.

## ಪುಣ್ಯಾಹ

ಯಾವುದೇ ಧಾರ್ಮಿಕಕೆಲಸದ ಆರಂಭ ಪುಣ್ಯಾಹದಿಂದ. ಷೋಡಶಸಂಸ್ಕಾರ-ಗಳಲ್ಲಂತೂ ಪುಣ್ಯಾಹ ಆಗಲೇಬೇಕು. ಅಭಿವೃದ್ಧಿಯನ್ನೂ ಮಂಗಲವನ್ನೂ ಪ್ರಾರ್ಥಿಸುವ **'ಭದ್ರಂ ಕರ್ಣೇಭಿಃ ಶೃಣುಯಾಮ'** ಎಂಬಿತ್ಯಾದಿ ಎಂಟು ಮಂತ್ರಗಳಿವೆ. ಇವಕ್ಕೆ

'ಪುಣ್ಯಾಹಮಂತ್ರ'ಗಳೆಂದು ಹೆಸರು. ''ನಮ್ಮ ಪಾಪಗಳನ್ನು ತೊಳೆದು ಬಿಡಿ, ನಮ್ಮನ್ನೂ ಸ್ಥಲವನ್ನೂ ಶುದ್ಧೀಕರಿಸಿ'' ಎಂಬ ಪ್ರಾರ್ಥನೆಯ ಹತ್ತು ಹಲವು ಮಂತ್ರಗಳು ಇವೆ. ಇವೂ ಪುಣ್ಯಾಹಮಂತ್ರಗಳೇ. ಇವನ್ನು ನಾಲ್ವರು ವಿಪ್ರರಿಂದ ಉದ್ಘೋಷ ಮಾಡಿಸಿಕೊಳ್ಳುವ ಪ್ರಕ್ರಿಯೆಯೇ **ಪುಣ್ಯಾಹವಾಚನ**. ವಧೂವರರ ಮನೆಗಳಲ್ಲಿ ಪ್ರತ್ಯೇಕವಾಗಿ ಅವರ ಮಾತಾಪಿತೃಗಳು ಕುಳಿತು ಪಕ್ಕದಲ್ಲಿ ವಿವಾಹಸಂಸ್ಕಾರದಿಂದ ಸಂಸ್ಕೃತರಾಗಬೇಕಾದ ಸಂಸ್ಕಾರ್ಯವಧು, ಇಲ್ಲವೇ ವರನನ್ನು ಕುಳ್ಳಿರಿಸಿಕೊಂಡು ಪುಣ್ಯಾಹ ಶುದ್ಧೋದಕದ ಪ್ರೋಕ್ಷಣೆಯಿಂದ ಶುದ್ಧಿಗೊಳ್ಳುತ್ತಾರೆ.

## ನಾಂದೀ

**ದೇವಕಾರ್ಯಾದಪಿ ಮುನೇ ಪಿತೃಕಾರ್ಯಂ ವಿಶಿಷ್ಯತೇ ।**
**ದೇವತಾನಾಂ ಹಿ ಪಿತರಃ ಪೂರ್ವಮಾಪ್ಯಾಯನಂ ಸ್ಮೃತಮ್ ॥**

''ದೇವತಾಕಾರ್ಯಕ್ಕಿಂತಲೂ ಪಿತೃಕಾರ್ಯದಲ್ಲಿ ಹೆಚ್ಚುಗಾರಿಕೆಯಿದೆ. ದೇವ-ಕಾರ್ಯಕ್ಕೂ ಮೊದಲು ಪಿತೃಪೂಜೆ ನಡೆಯಬೇಕು'' ಎಂಬುದು ಹರಿವಂಶದ ಮಾತು.

ದೇವತೆಗಳಿಂದಲೂ ಪೂಜ್ಯರಾದ ಅಗ್ನಿಷ್ವಾತ್ತ ಮೊದಲಾದ ಚಿರಪಿತೃಗಳಿದ್ದಾರೆ. ನಮ್ಮ ವಂಶದ ಮೃತಚೇತನಗಳಿಗೂ ನಿಯಾಮಕರಾದ ಪಿತೃದೇವತೆಗಳಿವರು. ಪಿತ್ರಾದಿ ಚತುರ್ವರ್ಗದ ಮೂಲಕ ಈ ಪಿತೃಗಳನ್ನೂ, ಸತ್ಯ-ವಸು ಎಂಬ ವಿಶ್ವೇದೇವತೆಗಳನ್ನೂ ಆರಾಧಿಸುವ ವಿಧಿಯೇ '**ನಾಂದೀ**'. ಅಕ್ಕಿ-ಕಾಯಿ-ತರಕಾರಿಗಳೆಂಬ ಆಮಾನ್ನವನ್ನಿತ್ತು ಪಿತೃಗಳನ್ನು ಕುರಿತು '**ಏತೇ ಭವಂತು ಮೇ ಪ್ರೀತಾಃ ಪ್ರಯಚ್ಛಂತು ಚ ಮಂಗಲಮ್**'' ಎಂದು ಪ್ರಾರ್ಥಿಸಲಾಗುತ್ತದೆ.

ವರನ ಮನೆಯಲ್ಲಿ ವರನ ತಂದೆತಾಯಿ ಕುಳಿತು ನಾಂದೀ ನೆರವೇರಿಸಿದರೆ, ವಧೂಗೃಹದಲ್ಲಿ ಕನ್ಯಾಪಿತೃಗಳು ನೆರವೇರಿಸುತ್ತಾರೆ. ತಮ್ಮ ತಂದೆ ತಾಯಿಯರು ಬದುಕಿದ್ದಾಗ ಅವರನ್ನು ಬಿಟ್ಟು ಪಿತಾಮಹಾದಿಗಳನ್ನು ಉಲ್ಲೇಖಿಸಿ ನಾಂದೀಸಮಾರಾಧನೆ ನಡೆಸುತ್ತಾರೆ.

## ಸಮಾವರ್ತನ, ಕಾಶೀಯಾತ್ರೆ

ನಾಂದಿಯಾದ ಮೇಲೆ ವರನಿಗೆ ಸಮಾವರ್ತನಾದಿ ಸಂಸ್ಕಾರ ಲೋಪವಾಗಿದ್ದಲ್ಲಿ ಆ ಪ್ರಯುಕ್ತ ಪ್ರಾಯಶ್ಚಿತ್ತವನ್ನು ಆಚರಿಸಿ ಸಮಾವರ್ತನೆಯು ನಡೆಯುತ್ತದೆ. ಸ್ನಾನದಿಂದ

ಇವ ಸ್ನಾತಕನಾಗುತ್ತಾನೆ. ಕಚ್ಚ, ಪೇಟಗಳಿಂದ ಅಲಂಕೃತನಾದ ವರ ಛತ್ರ ದಂಡ ಹಿಡಿದು ಕಾಶೀಯಾತ್ರೆಗೆ ಹೊರಟು ಬಿಡುತ್ತಾನೆ. ಸೋದರಮಾವ ಮುಂತಾದ ಸಂಬಂಧಿಗಳು ತಡೆದುದರಿಂದ ಹಿಂತಿರುಗಿ ಬಂದು ಅಗ್ನಿಸನ್ನಿಧಿಯಲ್ಲಿ ಕುಳಿತು ಆಹುತಿಯಿತ್ತು ಸಮಾವೃತನಾಗುತ್ತಾನೆ.

**ಸಮಾವರ್ತನ** ಎಂದರೆ ''ಚೆನ್ನಾಗಿ ಹಿಂತಿರುಗುವುದು'' ಎಂದರ್ಥ. ಉಪ-ನಯನದಂದು ಗುರುಕುಲಪ್ರವೇಶಿಸಿದವ, ಇಂದು ಓದು ಮುಗಿಸಿ ಸುಂದರನಾಗಿ ಹಿಂತಿರುಗುತ್ತಿದ್ದಾನೆ. ಅದಕ್ಕಾಗಿ ಗುರು ಅವನಿಗೆ ಸ್ನಾನ ಮಾಡಿಸುತ್ತಾನೆ. ಸ್ನಾನ ಮಾಡಿದುದರಿಂದ ಇವ ಸ್ನಾತ. ಸ್ನಾತನೇ ಸ್ನಾತಕ.

ಗುರುಗಳು ಇವನಿಗೆ ''ಮದುವೆಯಾಗು, ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ'' ಎಂದು ಹೇಳಿ ಕಳುಹಿಸಿದ್ದಾರೆ. ಹಾಗಾಗಿ ಇವನು ಕಾಶಿಗೆ ಹೋಗುವ ಅವಶ್ಯಕತೆಯಿಲ್ಲ. ಮದುವೆ ನಿಶ್ಚಿತವಾದ ಮೇಲೆ ತೀರ್ಥಯಾತ್ರೆ ಏಕೆ? 'ಅಹಂ ಕಾಶೀಂ ಗಮಿಷ್ಯಾಮಿ ತೀರ್ಥಯಾತ್ರಾಪರೋಽಧುನಾ' ಎನ್ನುತ್ತಾನೆ ಇವ. ಬಹುಶಃ ವಿಷಯಾಸಕ್ತಿಯನ್ನು ಪ್ರೇರಿಸುವ ವಿವಾಹದಂತಹ ವಿಧಿಯಲ್ಲಿ ವೈರಾಗ್ಯದ ಸ್ಪರ್ಶವನ್ನು ಕೊಡುವುದು ಇದರ ಉದ್ದೇಶವಿರಬಹುದು.

ಹೀಗೊಂದು ದಂತಕಥೆ –

ಗುರುಕುಲದಲ್ಲಿ ವಿದ್ಯಾಭ್ಯಾಸ ಮುಗಿಸಿ ಸ್ನಾತಕನಾದ ವಟುವೊಬ್ಬ ಇನ್ನೂ ಓದಬೇಕೆಂದು ಬಯಸಿದ. ಆ ಕಾಲದಲ್ಲಿ ಕಾಶೀ ಸಕಲವಿದ್ಯೆಯ ತವರಾಗಿತ್ತು. ಓದಿದ ವಿದ್ಯೆಯಲ್ಲಿ ಅಧಿಕಾರವನ್ನು ಸ್ಥಾಪಿಸಬಯಸಿದ ಈತ ಕಾಶಿಯಾತ್ರೆಗೆ ಸನ್ನದ್ಧನಾದಾಗ ಮನವು ಹಲವು ಸಂಶಯಗಳ ಹುತ್ತವಾಗಿತ್ತು. ಸ್ನಾತಕನಾಗಿಯೇ ಸ್ನಾತಕೋತ್ತರ ಅಧ್ಯಯನ ಉಚಿತವೇ? ಮದುವೆಯಾಗಿ ಗೃಹಸ್ಥನಾಗಿ ಆಕೆಯೊಂದಿಗೆ ಅಧ್ಯಯನ ನಡೆಸುವುದು ಉಚಿತವೇ? ಅಥವಾ ಸನ್ನ್ಯಾಸಿಯಾಗಿ ಬದುಕಲೋ?

ದಾರಿಯಲ್ಲಿ ಓರ್ವ ಜ್ಞಾನಿ ಗೋಚರಿಸಿದ. ಆತನ ಮುಖವರ್ಚಸ್ಸನ್ನು ಕಂಡ ಸ್ನಾತಕ ತನ್ನ ಮನದ ಗೊಂದಲವನ್ನು ಬಿಚ್ಚಿದ. ಆ ತಪಸ್ವಿ ಆತನನ್ನು ತನ್ನ ಮನೆಗೆ ಕರೆದೊಯ್ದ. ಸುಗುಣಿ, ಸುರೂಪಿಣಿಯೂ ಆದ ಮಗಳನ್ನಿತ್ತು ಹರಸಿದ. ಆತ ಗಾರ್ಹಸ್ಥ್ಯದಲ್ಲೇ ಸುಖಿಯಾಗಿ ಸಿದ್ಧಿ ಪಡೆದ.

ಕಾಶೀಯಾತ್ರೆಯ ಬಗ್ಗೆ ಹಲವರು ಕೆಲವು ಅಭಿಪ್ರಾಯಗಳನ್ನು ಊಹಿಸಿ ಹೇಳುತ್ತಾರೆ.

ಅದೇನೇ ಇರಲಿ, ಸೂತ್ರ ಕಾರಿಕೆ ಮುಂತಾದ ಯಾವುದೇ ಪ್ರಯೋಗಗ್ರಂಥಗಳಲ್ಲಿ ಈ ಕಾಶೀಯಾತ್ರೆಯ ಬಗ್ಗೆ ಉಲ್ಲೇಖವಿಲ್ಲ. ನಡೆದು ಬಂದುದನ್ನು ನಡೆಸಿಕೊಂಡು ಹೋಗುವುದಷ್ಟೇ ನಮ್ಮ ಭಾರ. ಅದೂ ಸಹ ಹತ್ತು ಹಲವರ ಸಂಭ್ರಮಕ್ಕೆ ಕಾರಣವಲ್ಲವೇ!! **'ಸಂತೋಷಂ ಜನಯೇತ್ ಪ್ರಾಜ್ಞಃ..'.**

## ಚಪ್ಪರಪೂಜೆ

ನಾಂದೀಸಮಾವರ್ತನೆಯ ದಿನದಂದೇ ಚಪ್ಪರಪೂಜೆಯು ನಡೆಯುತ್ತದೆ. ಈಶಾನ್ಯದಿಂದಾರಂಭಿಸಿ ನಾಲ್ಕೂ ಕಂಬಗಳಿಗೆ ಹೂಹಾರವನ್ನು ಸುತ್ತಿ ಪೂಜಿಸಿ ಹಾಲು ಹಾಕುತ್ತಾರೆ. ತಳಿರು ತೋರಣಗಳಿಂದ ಅಲಂಕೃತ ಚಪ್ಪರದ ಕೆಳಗೆ ವಧುವನ್ನು (ವರನ ಮನೆಯಲ್ಲಾದರೆ ವರನನ್ನು) ಪೂರ್ವಾಭಿಮುಖವಾಗಿ ನಿಲ್ಲಿಸಿ ಮುತ್ತೈದೆಯರು ಆರತಿ ಎತ್ತುತ್ತಾರೆ. ದೃಷ್ಟಿ ತೆಗೆದು ಈಡುಗಾಯಿ ಒಡೆಯುತ್ತಾರೆ. ಸಿಹಿ ಹಂಚುತ್ತಾರೆ. ಇಲ್ಲಿ ಹಿರಿಯ ಮುತ್ತೈದೆಯರದೇ ಪೌರೋಹಿತ್ಯ. ಹಾಡುಗಳೇ ಮಂತ್ರ.

## ದೇವರ ಸಮಾರಾಧನೆ

ಆರಾಧನೆಯೆಂದರೆ ಪೂಜೆ. ಸಮಾರಾಧನೆಯೆಂದರೆ ಹೊಟ್ಟೆ ತುಂಬಾ **ಊಟ** ಹಾಕುವುದು.

**'ಏತಸ್ಮಿನ್ನೇವ ದಿನೇ ಕುಲದೇವತಾಪ್ರೀತಯೇ ದಶಾವರಾನ್ ಧರಾಮರಾನ್ ಭೋಜಯೇತ್ '** ಎಂಬ ಮಾತು ಆಧುನಿಕ ಪ್ರಯೋಗಗ್ರಂಥಗಳಲ್ಲಿವೆ. ವಿವಾಹ ಪೂರ್ವಭಾವಿಯಾಗಿ ಮಂಟಪಪ್ರತಿಷ್ಠಾ, ಗ್ರಹಪೂಜಾದಿಗಳನ್ನು ನಡೆಸುವ ದಿನದಂದು ತಮ್ಮ ಕುಲದೇವತೆಯ ಸಂಪ್ರೀತಿಗಾಗಿ ಹತ್ತಕ್ಕೆ ಕಡಿಮೆಯಿಲ್ಲದಂತೆ ಭೂಸುರರ ಭೋಜನವಾಗಬೇಕು. ದೇವರ ಪ್ರೀತಿಗಾಗಿ ನಡೆಸುವ ಈ ಸಮಾರಾಧನೆಯೇ **ದೇವರ ಸಮಾರಾಧನೆ**. ಇಂದು ಸಾಮಾನ್ಯವಾಗಿ ಮದುವೆಯ ಹಿಂದಿನ ದಿನ ಇದನ್ನು ಮಾಡುತ್ತಾರೆ.

ದೇವರ ಸಮಾರಾಧನೆಯು ವರಗೃಹ-ವಧೂಗೃಹಗಳೆರಡರಲ್ಲೂ ಪ್ರತ್ಯೇಕ ನಡೆಯುತ್ತದೆ. ಪ್ರಾತಃಕಾಲದೊಳೆದ್ದು ಮನೆಯ ಹಿರಿಯರು ಮನೆದೇವರನ್ನು ವಿಜೃಂಭಣೆಯಿಂದ ಪೂಜಿಸುತ್ತಾರೆ. ಕೆಲಗೃಹಗಳಲ್ಲಿ ಹಿರಿಯರಿಂದ ಬಂದ ದೇವತಾ ಪ್ರತಿಮೆಗಳಿರುತ್ತವೆ. ನಿತ್ಯಪೂಜೆಯಲ್ಲಿ ಇವನ್ನು ಪೂಜಿಸುವುದಿಲ್ಲ. ವರ್ಷಕ್ಕೊಮ್ಮೆ ಉದ್ವರ್ತನೆ ನಡೆಸುತ್ತಾರೆ. ದೇವರ ಸಮಾರಾಧನೆಯ ದಿನದಂದು ಅಂತಹ

ಪ್ರತಿಮೆಗಳನ್ನು ತೆಗೆದು ತೊಳೆದು ಶುದ್ಧೀಕರಿಸಿ ಪಂಚಾಮೃತ ಅಭಿಷೇಕಾದಿಗಳೊಂದಿಗೆ ಪೂಜೆ ನಡೆಸುತ್ತಾರೆ. ಭಕ್ಷ್ಯ-ಭೋಜ್ಯಗಳ ನೈವೇದ್ಯದೊಂದಿಗೆ ದೇವತಾಪ್ರೀತಿಗಾಗಿ ಬ್ರಾಹ್ಮಣಸಮಾರಾಧನೆ ನಡೆಯುತ್ತದೆ.

ದೇವರ ಸಮಾರಾಧನೆಯ ದಿನವೇ ರಾತ್ರಿ ವರಪೂಜೆಯ ಕಾರ್ಯಕ್ರಮವಿರುತ್ತದೆ. ಕೆಲವೊಮ್ಮೆ ಅನುಕೂಲತೆಗನುಗುಣವಾಗಿ ದೇವರಸಮಾರಾಧನೆಯನ್ನು ನಾಲ್ಕೈದು ದಿನಗಳ ಮುಂಚಿತವಾಗಿಯೇ ನಡೆಸಲಾಗುತ್ತದೆ.

ಈ ದೇವರ ಸಮಾರಾಧನೆಯು ಸೂತ್ರಕಾರಿಕೆಗಳಲ್ಲಿ ಉಲ್ಲೇಖಗಳಿಲ್ಲದ, ಸಂಪ್ರ-ದಾಯಪ್ರಾಪ್ತವಾಗಿ ನಡೆದು ಬಂದ ವಿಧಿ. ಹಾಗಾಗಿಯೇ ತುಳವರ ಸಂಪ್ರದಾಯದಲ್ಲಿ ನಾಂದಿಯ ದಿನದಂದೇ ಒಂದು ಗಣಹೋಮವನ್ನು ಮಾಡಿ ಕುಲದೇವರನ್ನು ಪ್ರಾರ್ಥಿಸಿ ಬ್ರಾಹ್ಮಣಸಂತರ್ಪಣೆಯನ್ನು ನಡೆಸುತ್ತಾರೆ. ಗ್ರಹಯಜ್ಞವನ್ನೂ ಇದೇ ದಿನ ನಡೆಸುವುದಿದೆ. 'ದೇವರ ಸಮಾರಾಧನೆ' ಎಂಬ ಪದ ಇಲ್ಲಿ ಚಾಲ್ತಿಯಲ್ಲಿಲ್ಲ.

## ಪ್ರಾಯಶ್ಚಿತ್ತಗಳು

ದ್ವಿಜನಿಗೆ ತನ್ನ ಹುಟ್ಟಿನಂದಿನಿಂದ ಚಟ್ಟದವರೆಗೂ ಅಗ್ನಿ ಬೇಕು. ಉಪನಯನದಿಂದ ಈತ ದ್ವಿಜನಾಗಿದ್ದಾನೆ. ಅಲ್ಲಿ 'ಸಮುದ್ಭವ'ನೆಂಬ ಅಗ್ನಿಯನ್ನು ಸ್ವೀಕರಿಸಿ ಅಗ್ನಿಕಾರ್ಯದ ಮೂಲಕ ಆರಾಧಿಸಿಕೊಂಡು ಬರುತ್ತಾನೆ. ಸಮಾವರ್ತನೆಯಂದು 'ಸೂರ್ಯ'ನಾಮಕ ಅಗ್ನಿಯನ್ನು ಸ್ವೀಕರಿಸಿ ಅಗ್ನಿಕಾರ್ಯವಿಧಿಯಿಂದ ಸೂರ್ಯಾಗ್ನಿಯನ್ನು ಉಪಾಸಿಸುತ್ತಾನೆ. ವಿವಾಹದಂದು 'ಯೋಜಕ'ನಾಮಕ ಅಗ್ನಿಯನ್ನು ಸ್ವೀಕರಿಸಿ ಗೃಹ್ಯಾಗ್ನಿಯಲ್ಲಿ ಔಪಾಸನವನ್ನು ನಡೆಸಿಕೊಂಡು ಬರುತ್ತಾನೆ. ಈ ಔಪಾಸನಾಗ್ನಿಯನ್ನು ಕೊನೆಯ ತನಕ ಆರಾಧಿಸಿಕೊಂಡು ಬಂದು ಕೊನೆಗೆ ಚಿತೆಯಲ್ಲಿ ಇದೇ ಅಗ್ನಿಯನ್ನಿತ್ತು ಅದರಲ್ಲಿ ತನ್ನ ಶರೀರವೆಂಬ ಹವ್ಯವನ್ನು ಹೋಮಿಸುತ್ತಾನೆ. ಶರೀರನಾಶಕ್ಕಿಂತ ಮುಂಚೆ ಅಗ್ನಿಗೆ ನಾಶವಿಲ್ಲ.

ಆತ್ಮಶ್ರಾದ್ಧವನ್ನು ಮಾಡಿಕೊಂಡ ಸನ್ನ್ಯಾಸಿ ಮಾತ್ರ ನಿರಗ್ನಿಕ. ಬ್ರಹ್ಮಚಾರಿ, ಸ್ನಾತಕ, ಗೃಹಸ್ಥರು ಅಗ್ನಿಯನ್ನು ಬಿಟ್ಟರೆ ಇವರು ಸನ್ನ್ಯಾಸಿಯಂತೆ ಸಂಸ್ಕಾರಕರ್ಮಗಳಲ್ಲಿ ಅನಧಿಕಾರಿಗಳಾಗುತ್ತಾರೆ. ಓರ್ವ ಬ್ರಹ್ಮಚಾರಿ ತನಗಾಗಿ ಸಮಾವರ್ತನ ಮಾಡಿಕೊಳ್ಳ-ಬೇಕಾದರೆ, ಅಥವಾ ಗೃಹಸ್ಥ ಸೀಮಂತ, ಉಪನಯನಾದಿ ಸಂಸ್ಕಾರಗಳನ್ನು ನಡೆಸ-ಬೇಕಾದರೆ ಅವನಲ್ಲಿ ಅಗ್ನಿ ಬೇಕು.

ಇಂದಿನ ಕಾಲದಲ್ಲಿ ಬೆರಳೆಣಿಕೆಯ ಮಂದಿ ಮಾತ್ರ ಅಗ್ನಿಸಂರಕ್ಷಣೆ ಮಾಡಿಕೊಂಡು ಬರುವವರು. ಉಳಿದ ಮಂದಿಯ ಅಗ್ನಿ ಕಾಲಾಗ್ನಿಯಲ್ಲಿ ಸೇರಿಕೊಂಡುಬಿಟ್ಟಿದೆ. ಇಂಥವರಿಗೆ ಹೇಗೆ ಸಂಸ್ಕಾರ??

ವಿವಾಹಾನಂತರದಲ್ಲಿ ಅಗ್ನಿವಿಚ್ಛೇದವಾದರೆ ಮತ್ತೆ ಅಗ್ನಿಯನ್ನು ಪಡೆಯಲು 'ಪುನಃಸಂಧಾನ' ಎಂಬ ಪ್ರಕ್ರಿಯೆಯಿದೆ. ಬ್ರಹ್ಮಚಾರಿಯು ಅಗ್ನಿ ಬಿಟ್ಟಾಗ ಅದು 'ಬ್ರಹ್ಮಚರ್ಯ-ವ್ರತಲೋಪ' ಎಂಬ ದೋಷವಾಗಿ ಬಿಡುತ್ತದೆ.

ಉಪನಯನದಲ್ಲಿ ಗಾಯತ್ರ್ಯುಪದೇಶವಾದ ಮೇಲೆ ನಾಲ್ಕುವರ್ಷವಾದರೂ ವೇದಾಧ್ಯಯನವನ್ನು ನಡೆಸಿ ಹದಿಮೂರನೆಯ ವಯಸ್ಸಿನಲ್ಲಿ 'ವಿದಾ ಮಘವನ್ ವಿದಾ' ಎಂದು ಆರಂಭವಾಗುವ ಮಹಾನಾಮ್ನೀ ಮಂತ್ರಗಳ ಉಪದೇಶವನ್ನು ಪಡೆಯಬೇಕು. ಹದಿನಾಲ್ಕನೇ ವರ್ಷದಲ್ಲಿ 'ಅಥ ಮಹಾವ್ರತಮ್' ಎಂಬಿತ್ಯಾದಿ ಮಹಾವ್ರತಮಂತ್ರಗಳನ್ನು ಉಪದೇಶ ಪಡೆಯಬೇಕು. ಹದಿನೈದನೆಯ ವಯಸ್ಸಿನಲ್ಲಿ 'ಅಥಾತಃ ಸಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ' ಇತ್ಯಾದಿ ಉಪನಿಷತ್ತನ್ನು ಉಪದೇಶ ಪಡೆಯಬೇಕು. ಈ ವಿದ್ಯಾವ್ರತಗಳನ್ನು ಗುರು ಅಥವಾ ತಂದೆಯಲ್ಲಿ ನಡೆಸಬೇಕು. ಇದಾದ ಮೇಲೆ ಈತ ಮೊದಲ ಬಾರಿ ಗಡ್ಡ ತೆಗೆಯುವ ಗೋದಾನ (ಗೋ = ಕೂದಲು, ದಾನ = ಕತ್ತರಿಸು-ವಿಕೆ) ಎಂಬ ಕರ್ಮವನ್ನು ಮಾಡಿ ಗುರುವಿಗೆ ಗೋಮಿಥುನವನ್ನು ದಾನವಾಗಿ ಇತ್ತು ಹದಿನಾರನೆಯ ವಯಸ್ಸಿನಲ್ಲಿ ಸಮಾವರ್ತನೆ ಮಾಡಿಸಿಕೊಳ್ಳಬೇಕು. ಆಮೇಲೆ ಸ್ನಾತಕ-ನಾಗಿದ್ದು ಅತಿಶೀಘ್ರ ವಿವಾಹವಾಗಬೇಕು.

ಉಪನಯನದಿಂದ ಸಮಾವರ್ತನೆಯ ತನಕ ಈತ ಬ್ರಹ್ಮಚಾರಿ. ಚತುರಾಶ್ರಮಗಳಲ್ಲಿ ಮೊದಲನೆಯ ಆಶ್ರಮವಿದು. ವಿವಾಹದಿಂದಾರಂಭಿಸಿ ಈತ ಗೃಹಸ್ಥಾಶ್ರಮಿ. ಹಾಗಾದರೆ ಸಮಾವರ್ತನೆಯಿಂದ ವಿವಾಹದ ತನಕ ಈತನ ಆಶ್ರಮ ಯಾವುದು? ಸ್ನಾತಕನು ಇತ್ತ ಬ್ರಹ್ಮಚಾರಿಯೂ ಅಲ್ಲ. ಅತ್ತ ಗೃಹಸ್ಥಾಶ್ರಮಿಯೂ ಅಲ್ಲ. ಹಾಗಾಗಿ ಇವ ಅನಾಶ್ರಮಿ.

'ಮೂರು ದಿನಕ್ಕಿಂತ ಹೆಚ್ಚು ಅನಾಶ್ರಮಿಯಾಗಿ ಉಳಿಯಬಾರದು' ಎಂಬ ಮಾತಿದೆ. 'ವರ್ಷಕ್ಕಿಂತ ಹೆಚ್ಚು ಅನಾಶ್ರಮಿಯಾಗಿರಬಾರದು' ಎಂಬ ಮಾತೂ ಇದೆ. ಒಟ್ಟಿನಲ್ಲಿ ಗುರುಕುಲವಾಸ ಮುಗಿಸಿ ಬಂದ ಮೇಲೆ ಸಮಾವರ್ತನೆಯಾಗಿ ವರ್ಷದೊಳಗೆ ವಿವಾಹವಾಗಬೇಕು.

ಈ ಮೇಲಿನ ಅಂಶಗಳಲ್ಲಿ ವ್ಯತ್ಯಾಸವಾದಾಗ ಅದು ದೋಷವಾಗುತ್ತದೆ. ''ಮಹಾನಾಮ್ನೀ , ಮಹಾವ್ರತ, ಉಪನಿಷತ್'' ಎಂಬ ವ್ರತಗಳು ಷೋಡಶಸಂಸ್ಕಾರದಲ್ಲಿ

ಸೇರಿದ್ದರೂ ಗುರುಕುಲವಾಸ ತಪ್ಪಿರುವ ಈ ದಿನಗಳಲ್ಲಿ ನಡೆಯುತ್ತಿಲ್ಲ. ಅದಕ್ಕಾಗಿ ಸಮಾವರ್ತನೆಗಿಂತ ಮುಂಚೆ ಬ್ರಹ್ಮಚರ್ಯವ್ರತಲೋಪಪ್ರಾಯಶ್ಚಿತ್ತವನ್ನು ಮಾಡಿ-ಕೊಂಡು ಈ ಮೂರು ಮಂತ್ರಗಳನ್ನು ಗುರುಸ್ಥಾನಾಪನ್ನರಾದ ಪುರೋಹಿತರಿಂದ ಉಪದೇಶ ಪಡೆಯುವುದು ಉಚಿತ. ಮಹಾನಾಮ್ನ್ಯಾದಿಗಳು ಬಹಳ ಉದ್ದವೇನಿಲ್ಲ. ಏಳೆಂಟು ಮಂತ್ರಗಳು ಅಷ್ಟೇ!

ಅನಾಶ್ರಮಿಯಾಗಿ ಎಷ್ಟು ವರ್ಷ ಕಳೆದಿದೆ ಎಂಬುದನ್ನು ಲೆಕ್ಕ ಹಾಕಿ ಆ ವರ್ಷದ ಸಂಖ್ಯೆಗಳಲ್ಲಿ ಕೃಚ್ಛ್ರಾಚರಣೆ (ಕೃಚ್ಛ್ರವೆಂಬುದು ಹನ್ನೆರಡು ದಿನಗಳಲ್ಲಿ ನಡೆಯುವ ಕ್ಲಿಷ್ಟ-ಪ್ರಾಯಶ್ಚಿತ್ತ) ನಡೆಸುವ ಆದೇಶವಿದೆ. ಅದು ಅಶಕ್ಯವಾದಾಗ ಅದಕ್ಕೆ ಪ್ರತಿನಿಧಿಯಾಗಿ ಗೋದಾನವನ್ನೀಯುವ ಅವಕಾಶವಿದೆ. ಇಂದಿನ ದಿನದಲ್ಲಿ ಕೃಚ್ಛ್ರಪ್ರತ್ಯಾಮ್ನಾಯ ಗೋದಾನಕ್ಕೂ ಪ್ರತಿನಿಧಿಯಾಗಿ ಒಂದಿಷ್ಟು ದಕ್ಷಿಣೆ ಕೊಡಿಸುವುದಕ್ಕೆ ವಿಪುಲಾವಕಾಶವಿದೆ. ಇದು ಅನಾಶ್ರಮಿತ್ವದೋಷ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ.

ಋತುಮತಿಯಾದ ನಂತರ ಪ್ರೌಢಾವಸ್ಥೆಯ ವಧುವನ್ನು ವಿವಾಹವಾಗುವುದರಿಂದ 'ವೃಷಲೀಪತಿತ್ವ' ದೋಷವುಂಟಾಗುವುದೆಂದು ಹಿಂದೆಯೇ ಹೇಳಿದೆ. ಈ ದೋಷ ಅನಿವಾರ್ಯವೇ ಆದರೂ ಅದರ ಪ್ರಾಯಶ್ಚಿತ್ತಕ್ಕಾಗಿ 'ಕೂಷ್ಮಾಂಡಹೋಮ'ದ ವಿಧಿಯಿದೆ. ಅನೇಕರು ವಿವಾಹಕ್ಕೆ ಮೊದಲೇ ಸಮಾವರ್ತನೆಯಂದು ಈ ಹೋಮವನ್ನು ಪ್ರಾಯಶ್ಚಿತ್ತರೂಪವಾಗಿ ನಡೆಸುತ್ತಾರೆ. ಕೆಲವೆಡೆ ವಧೂಗೃಹದಲ್ಲಿ ನಡೆಸುವ ತಪ್ಪು ಕ್ರಮವಿದೆ. ನನ್ನ ಅಭಿಪ್ರಾಯದಲ್ಲಿ ವಿವಾಹವಾದ ನಂತರ ವಧೂವರರೇ ಜೊತೆಯಾಗಿ ಕುಳಿತು ಕೂಷ್ಮಾಂಡ ಹೋಮವನ್ನು ಆಚರಿಸಿ ನಂತರ ಗರ್ಭಾಧಾನಾದಿ ಸಂಸ್ಕಾರ ನಡೆಸುವುದು ಉಚಿತ.

ಇವಿಷ್ಟೂ ವರನ ಕಡೆಯಲ್ಲಿ ನಡೆಯಬೇಕಾದ ಪ್ರಾಯಶ್ಚಿತ್ತಗಳು.

ವಧೂಗೃಹದಲ್ಲಿ ಕನ್ಯೆಯ ಚೌಲಸಂಸ್ಕಾರಲೋಪನಿಮಿತ್ತ ಪ್ರಾಯಶ್ಚಿತ್ತವಾಗಿ ಸುವರ್ಣದಾನವನ್ನೀಯುವ ವಿಧಿಯಿದೆ.

ಸ್ತ್ರೀಯರಿಗೂ ಚೌಲಸಂಸ್ಕಾರವಿದೆ. ಅನೇಕ ಕಡೆ ಇದು ನಡೆಯುವುದಿಲ್ಲ. ಆಗ ನಾಂದಿಯ ದಿನದಂದು ಆ ನಿಮಿತ್ತ ಸುವರ್ಣದಾನರೂಪ ಪ್ರಾಯಶ್ಚಿತ್ತವನ್ನು ಮಾಡ-ಬೇಕು.

ಋತುಮತೀವಿವಾಹಕ್ಕೆ ಸಂಬಂಧಿಸಿದಂತೆ ವಧುವಿನ ತಂದೆಗೂ ಪ್ರಾಯಶ್ಚಿತ್ತವನ್ನು ಶಾಸ್ತ್ರ ವಿಧಿಸಿದೆ. ಋತುಸಂಖ್ಯೆಗೆ ಅನುಗುಣವಾಗಿ ಗೋದಾನ ಹೇಳಿದೆ. ಇಂದಿನ

ಕಾಲಕ್ಕೆ ಇದು ಅತಿಯೆನಿಸಬಹುದು. ಅಂತೂ ವಿವಾಹ ಪೂರ್ವ ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಿದರೆ ಸಾಕು. ಧರ್ಮಸಿಂಧುಸಾರದ ಕೊನೆ ಮಾತು ಇದೇ. **‘ಕನ್ಯಾದಾತಾ ಋತುಸಂಖ್ಯಯಾ ಗೋದಾನಾನಿ, ಯಥಾಶಕ್ತಿ ಬ್ರಾಹ್ಮಣಭೋಜನಂ ವಾ ಕೃತ್ವಾ ಕನ್ಯಾದಾನೇ ಯೋಗ್ಯೋ ಭವೇತ್’.**

ಇವರು ಹೇಳುವಂತೆ ಕನ್ಯೆಗೂ ಒಂದು ಪ್ರಾಯಶ್ಚಿತ್ತವಿದೆ. **‘ಕನ್ಯಾ ತು ಉಪವಾಸ-ತ್ರಯಾಂತೇ ಗವ್ಯಪಯಃಪಾನಂ ಕೃತ್ವಾ ವಿಪ್ರಕುಮಾರ್ಯೈ ಸರತ್ನಭೂಷಣಂ ದತ್ವಾ ಉದ್ವಾಹ ಯೋಗ್ಯಾ ಭವತಿ’.**

## ಕೂಷ್ಮಾಂಡಹೋಮ

ಪ್ರಾಯಶ್ಚಿತ್ತಹೋಮವಾದ ಕೂಷ್ಮಾಂಡದ ಬಗೆಗೆ ಎರಡು ಮಾತು. ಕೆಲವರಿಗೆ ಕೂಷ್ಮಾಂಡವೆಂದರೆ ಕುಂಬಳಕಾಯಿಯ ನೆನಪಾಗುತ್ತದೆ. ಇನ್ನೂ ಕೆಲವರಿಗೆ ‘ಕೂಷ್ಮಾಂಡಾ ಭೈರವಾದಯಃ’ ಎಂದಂತೆ ಕೂಷ್ಮಾಂಡವೆಂಬ ಪಿಶಾಚಿಗಳ ನೆನಪಾಗ-ಬಹುದು. ಇಲ್ಲಿ ಇವೆರಡೂಅಲ್ಲ. **ಕೂಷ್ಮಾಂಡವೆಂಬುದು ಮಂತ್ರ. ತೈತ್ತಿರೀಯ ಆರಣ್ಯಕದ ದ್ವಿತೀಯ ಪ್ರಶ್ನದಲ್ಲಿ ಬರುವ ೭೨ಮಂತ್ರಗಳೇ ಕೂಷ್ಮಾಂಡಗಳು.**

ಅರುಣಾದಿ ಮುನಿಗಳು ವಾತರಶನ ಎಂಬ ಮಹಾಮಹಿಮರನ್ನು ಕುರಿತು ಸಕಲ ಪಾಪಗಳಿಗೆ ಪ್ರಾಯಶ್ಚಿತ್ತವೆನಿಸುವ ಮಂತ್ರವನ್ನು ನೀಡುವಂತೆ ಬೇಡಿದರು. ವಾತರಶನರು ಸಾಕ್ಷಾತ್ಕರಿಸಿಕೊಂಡ ಮಂತ್ರ ಕೂಷ್ಮಾಂಡ. ಪಾಪಗಳ ಹೆಸರನ್ನು ಪ್ರತ್ಯೇಕ ಉಲ್ಲೇಖಿಸಿ **‘ಅಗ್ನಿರ್ಮಾ ತಸ್ಮಾದನೃಣಂ ಕೃಣೋತು’** ‘ಅಗ್ನಿದೇವನು ನನ್ನನ್ನು ಆ ಎಲ್ಲಾ ಪಾಪಗಳಿಂದ ಬಿಡುಗಡೆಗೊಳಿಸಲಿ’ ಎಂಬ ಪ್ರಾರ್ಥನೆ ಇಲ್ಲಿದೆ.

ಈ ಹೋಮಮಾಡುವುದು ಅಶಕ್ಯವಾದಲ್ಲಿ ಕೂಷ್ಮಾಂಡಮಂತ್ರಗಳ ಸಕೃದಾವೃತ್ತಿ ಪಾರಾಯಣವನ್ನಾದರೂ ಮಾಡಬೇಕು. ಸ್ವತಃ ಪಠನೆ ಮಾಡಲು ಆಗದಿದ್ದರೆ ಪಾರಾಯಣ ಮಾಡಿಸಿ ಶ್ರವಣವನ್ನಾದರೂ ಮಾಡಬೇಕು. **‘ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ’** ಎಂಬ ಮಾತು ಯಾಗ ಮಾಡಲಾಗದಿದ್ದರೆ ಯಾಗ ಮಂತ್ರಗಳ ಅಧ್ಯಯನ ಪಾರಾಯಣಗಳೂ ಫಲದಾಯಕವೆಂದಿದೆ.

## ಗೌರೀಪೂಜೆ

ಇಷ್ಟ ಪತಿಯನ್ನಿತ್ತು ಭಾಗ್ಯವನ್ನು ಕರುಣಿಸುವ ದೇವಿ ಕಾತ್ಯಾಯಿನಿ. ವೃಂದಾವನದ

ಗೋಕುಲದ ಸ್ತ್ರೀಯರು ಶ್ರೀಕೃಷ್ಣನನ್ನು ಪತಿಯಾಗಿ ಪಡೆಯಲು ದೇವಿ ಕಾತ್ಯಾಯಿನಿಯನ್ನು ಆರಾಧಿಸಿದ್ದ ವಿಷಯವು ಭಾಗವತದಲ್ಲಿದೆ.

ವಿವಾಹದಂದು ವಧು ಗೌರ್ಯಾದಿ ದೇವಿಯರನ್ನು ಆರಾಧಿಸುತ್ತಾಳೆ. ಗೌರೀಹರರ ಮೂರ್ತಿ, ಕಾತ್ಯಾಯಿನೀ ಪ್ರತಿಮೆ, ಮಹಾಲಕ್ಷ್ಮಿ ಶಚೀಪ್ರತಿಮೆಗಳಲ್ಲಿ ಅಥವಾ ಕುಂಕುಮ ರಂಗೋಲಿಗಳಿಂದ ಬರೆದ ಚಿತ್ರಗಳಲ್ಲಿ ಶಚೀ, ಅರ್ಧನಾರೀಶ್ವರ, ಗೌರೀ, ಮಹಾಲಕ್ಷ್ಮೀ ದೇವಿಯರನ್ನು ನವವಧೂ ಕುಂಕುಮಾದಿಗಳಿಂದ ಅರ್ಚಿಸುತ್ತಾಳೆ. ಈ ಸಮಯದಲ್ಲಿ ಆಕೆಯ ಎತ್ತರದಷ್ಟೇ ಪರಿಮಾಣದಲ್ಲಿ ಉದ್ದವುಳ್ಳ 27 ಬತ್ತಿಗಳಿಂದ ದೀಪಪ್ರಜ್ವಾಲನೆಯ ಕ್ರಮವಿದೆ. ಈ ಗೌರ್ಯಾದಿಪೂಜೆಯ ಪದ್ಧತಿ ಕೆಲವೆಡೆ ಮಾತ್ರ.

## ದಿಬ್ಬಣ ಹೊರಡುವುದು

ಬಣವೆಂದರೆ ಗುಂಪು. ದಿಬ್ಯ ದಿಬ್ಬ ಮೊದಲಾದ ಶಬ್ದಗಳಿಗೆ ಶ್ರೇಷ್ಠವಾದುದು ಎಂದರ್ಥ. ದಿವ್ಯವಾದ ಬಣ ದಿಬ್ಬಣವೆನಿಸಿದೆ. ಅಷ್ಟಮಂಗಲವನ್ನು ಪುರಸ್ಕರಿಸಿ ವಾದ್ಯವಾಲಗದೊಂದಿಗೆ ದಿವ್ಯ ಉಡುಗೆಗಳಿಂದ ವಾಹನಾದಿಗಳೊಂದಿಗೆ ಸಾಗುವ ಉತ್ಸವದ ಗುಂಪಿಗೆ ದಿಬ್ಬಣವೆನ್ನುತ್ತೇವೆ.

ವಿವಾಹದ ದಿನ ವರನು ಮತ್ತು ವರನ ಮಾತಾಪಿತೃಗಳು ಮಂಗಲಸ್ನಾನವನ್ನು ಮಾಡಿ ನಿತ್ಯಾನುಷ್ಠಾನವನ್ನು ಮುಗಿಸಿ ಅಲಂಕೃತರಾಗುತ್ತಾರೆ. ವರನು ವಿಪ್ರರೊಂದಿಗೆ ಅಥವಾ ಕಲಶಕನ್ನಡಿ ಹಿಡಿಯುವ ತನ್ನ ಭಗಿನಿಯೊಂದಿಗೆ ಸಾತ್ವಿಕವಾದ ಅಲ್ಪಾಹಾರವನ್ನು ಸ್ವೀಕರಿಸುತ್ತಾನೆ. ಈ ಭೋಜನವಿಲ್ಲದೆ ಕನ್ಯಾಪರಿಗ್ರಹವಿಲ್ಲ. **'ಭುಕ್ತ್ವಾ ಕನ್ಯಾಂ ಪ್ರಗೃಹ್ಣೀಯಾತ್ ಸಾವಿತ್ರೀಗ್ರಹಣಂ ತಥಾ'** ಉಪನಯನದ ದಿನ ಗಾಯತ್ರೀಗ್ರಹಣ ಹಾಗೂ ವಿವಾಹದ ದಿನ ಕನ್ಯಾಪಾಣಿಗ್ರಹಣ ಇವೆರಡೂ ಭೋಜನಾನಂತರವೇ ನಡೆಯಬೇಕು. ಕನ್ಯೆಯ ಕೈಹಿಡಿಯುವಾಗ ಈತ ನಿತ್ರಾಣದಿಂದ ಬೆವತು ಬಸವಳಿಯ-ಬಾರದಲ್ಲವೇ?

ಒಮ್ಮೆ ಮಾತ್ರ ಒಗೆದ ನೂತನವಸ್ತ್ರದಿಂದ ಷಟ್ಪುಚ್ಛಕಚ್ಚೆಯುಟ್ಟು ಉತ್ತರೀಯ ಧರಿಸಿ ಪುಷ್ಪಮಾಲೆ, ಬಂಗಾರದ ಸರಗಳಿಂದ ಅಲಂಕೃತನಾಗಿ ವರ ಹೊರಡುವುದಕ್ಕೆ ಸಿದ್ಧನಾಗಿದ್ದಾನೆ. ಕೈಯಲ್ಲಿ ವೇಣುದಂಡವನ್ನೂ ಹಿಡಿದಿದ್ದಾನೆ.

ಈತನ ಭಗಿನಿಯೋರ್ವಳು ಕಲಶಕನ್ನಡಿ ಹಿಡಿಯಲಿರುವ ತನಗೆ ಮರ್ಯಾದೆಯಾಗಿ ವರನೇ ಕೊಟ್ಟ ಸೀರೆಯುಟ್ಟು ಅಲಂಕೃತಳಾಗಿದ್ದಾಳೆ. ಕೈಯ್ಯಲ್ಲಿರುವ ತಟ್ಟೆಯಲ್ಲಿ ಧಾನ್ಯ,

ಒಂದು ಕಲಶ(ಗಿಂಡಿ), ಕನ್ನಡಿ, ಹೂವು(ಶಿಂಗಾರ)ಗಳನ್ನು ಹಿಡಿದಿದ್ದಾಳೆ. ವಧುವಿಗೆ ಕಟ್ಟಬೇಕಾದ ಬಾಸಿಂಗವನ್ನು ಈ ಗಿಂಡಿಗೆ (ಕಲಶಕ್ಕೆ) ಅಲಂಕರಿಸಿದ್ದಾಳೆ.

ಈಗ ಮುಂಡಾಸಿನಿಂದಲೂ ಅಲಂಕೃತನಾದ ವರ ತನ್ನ ಭಗಿನಿಯೊಡನೆ ಮನೆಯ ಮುಂದೆ ತುಳಸಿ ಸನ್ನಿಧಾನದಲ್ಲಿ ಕುಳಿತುಕೊಳ್ಳುತ್ತಾನೆ. ನಾಲ್ವರು ಮುತ್ತೈದೆಯರು ಇವರಿಗೆ ಅಕ್ಷತೆ ಕಾಳು ಹಾಕಿ ನಾಲ್ಕು ಕುಂಭೋದಕಗಳಿಂದ ಪ್ರೋಕ್ಷಿಸುವರು. ಹರಿದ್ರಾ ಕುಂಕುಮೋದಕದಿಂದ ನೀವಾಳಿಸಿ ತೆಗೆಯುತ್ತಾರೆ. ಈ ವಿಧಿಗೆ ತೌಳವ ಪರಿಭಾಷೆಯಲ್ಲಿ 'ಕಡ್ಯನೀರ್' ಎನ್ನುತ್ತಾರೆ. ಕಡ್ಯ ಎಂದರೆ ಕುಂಭ. ಕುಂಭೋದಕಪ್ರೋಕ್ಷಣೆ ಎಂದರ್ಥ.

ಸುವಾಸಿನಿಯರ ಈ ಪ್ರಕ್ರಿಯೆಯಿಂದ ದಿಬ್ಬಣ ಹೊರಡುವ ಪ್ರಕ್ರಿಯೆ ಆರಂಭವಾಗಿದೆ ಎಂದರ್ಥ. ಎಲ್ಲರೂ ಹೊರಡುವ ತರಾತುರಿಯಲ್ಲಿರುತ್ತಾರೆ. ಈಗ ವರ ಮನೆಯೊಳಗೆ ಬಂದು ದೇವರಿಗೂ ಹಿರಿಯರಿಗೂ ನಮಸ್ಕರಿಸುತ್ತಾನೆ. ದೇವರ ಮುಂದೆ ಕುಳಿತುಕೊಳ್ಳುತ್ತಾನೆ. ಹಿರಿಯರೋರ್ವರು ಇವನಿಗೆ ಬಾಸಿಂಗ ಕಟ್ಟುತ್ತಾರೆ. ಬಾಸಿಂಗ-ವೆಂಬುದೊಂದು ಶಿರೋಲಂಕಾರವಿಶೇಷ. ಇದು ಪ್ರಾದೇಶಿಕವಾಗಿ ಭಿನ್ನ ಭಿನ್ನ ಆಕಾರಗಳಲ್ಲಿ ಇರುತ್ತದೆ. ತೌಳವ ದೇಶದಲ್ಲಿ ಹಿಂಗಾರ(ಅಡಿಕೆಹೂವು)ದಿಂದ ನಿರ್ಮಿಸಿದ ಬಾಸಿಂಗವು ಚಾಲ್ತಿಯಲ್ಲಿತ್ತು. ಈಗೀಗ ಅಂಗಡಿಗಳಲ್ಲಿ ಲಭಿಸುವ ಝಗಝಗಿಸುವ ಬಾಸಿಂಗಗಳು ಬಳಸಲ್ಪಡುತ್ತಿದೆ.

ಬಾಸಿಂಗ ಕಟ್ಟಿಸಿಕೊಂಡ ವರ ದೇವರ ಮುಂದೆಯೇ ಕುಳಿತು ತನ್ನ ತಾಯಿ ತಂದಿತ್ತ ಹಾಲನ್ನು ಕುಡಿದು ವೇಣುದಂಡವನ್ನು ಧರಿಸಿ ಕಳಶಕನ್ನಡಿಯನ್ನು ಹಿಡಿದ ಭಗಿನಿಯಿಂದ ಪುರಸ್ಕೃತನಾಗಿ ಹೊರಡುತ್ತಾನೆ. ವಿಪ್ರರು ಈಗ ಶಕುಂತಸೂಕ್ತವನ್ನೂ, ಮಂಗಲಾಷ್ಟಕವನ್ನೂ ಪಠಿಸುತ್ತಾರೆ. ವಾದ್ಯಗಳು ಮೊಳಗುತ್ತವೆ. ವಿಭವಾನುಸಾರ ವಾಹನವೇರಿ ದಿಬ್ಬಣ ಹೊರಡುತ್ತದೆ.

**ಕನ್ನಿಕೆ, ಕನ್ನಡಿ, ಪುಷ್ಪಮಾಲಾ, ಕಲಶ, ದೀಪ, ಅಕ್ಷತ, ಧ್ವಜ(ಛತ್ರ), ಅರಳು ಇವು ಅಷ್ಟಮಂಗಲದ್ರವ್ಯಗಳು.** ಇವುಗಳೊಂದಿಗೆ ಅರಿಶಿನ-ಕುಂಕುಮ ಮೊದಲಾದ ಮಂಗಲದ್ರವ್ಯ , ಪನ್ನೀರು, ಗಂಧಾದಿಗಳೂ ಜೊತೆಗಿರಲಿ. ವೇದವೇತ್ತರಾದ ಜ್ಞಾನಿಗಳು ಮುಂದಿರಲಿ. ಪತಿ-ಪುತ್ರವತೀ ಸುಮಂಗಲಿಯರ ಬಳೆ ಗೆಜ್ಜೆಗಳ ಶಬ್ದಗಳಿಗಿಂತಲೂ ಮುಖ್ಯವಾಗಿ ಶೋಭನಪದಗಳ ಇಂಪು ಇರಲಿ. ವರ ಛತ್ರ ಧರಿಸುವುದಾದರೆ ಬಿಳಿ ಅಥವಾ ಚಿತ್ರವರ್ಣದ್ದಾಗಿರಲಿ. ಕಪ್ಪುಕೊಡೆ ದಿಬ್ಬಣಕ್ಕೆ ಶೋಭೆ ತರುವುದಿಲ್ಲ.

ಇದಿಷ್ಟು ದಿಬ್ಬಣ ಹೊರಡುವ ಕ್ರಮ. ಈಗಿನ ಕಾಲದಲ್ಲಿ ಹಿಂದಿನ ದಿನವೇ ಕಲ್ಯಾಣ

ಮಂದಿರಕ್ಕೆ ವರಪಕ್ಷದವರೂ ಬಂದಿರುತ್ತಾರೆ. ಪುರೋಹಿತರೂ ಅಲ್ಲಿಯೇ ಸೇರಿಕೊಳ್ಳುತ್ತಾರೆ. ಹಾಗಾಗಿ ಮದುವೆಯ ದಿನ ಕಲ್ಯಾಣಮಂದಿರದ ತಮ್ಮ ಕೋಣೆಯಲ್ಲೇ ಯಥಾಸಂಭವ ಕ್ರಮಗಳನ್ನು ನಡೆಸಿ, ಕಲ್ಯಾಣಮಂಟಪದಿಂದ ಹೊರಗೆ ಸ್ವಲ್ಪದೂರ ಹೋಗಿ ಅಲ್ಲಿ ತಮ್ಮ ಬಂಧುಜನರೊಂದಿಗೆ ವಾದ್ಯಘೋಷದೊಂದಿಗೆ ಅಷ್ಟಮಂಗಳಪುರಸ್ಕೃತರಾಗಿ ಕಲ್ಯಾಣಮಂದಿರದ ದ್ವಾರದೇಶದಲ್ಲಿ ಎದುರುಗೊಳ್ಳುತ್ತಾರೆ.

## ವಧೂಗೃಹದಲ್ಲಿ ವರ

ಸಂಭ್ರಮದ ದಿಬ್ಬಣ ಇದೀಗ ವಧೂಗೃಹವನ್ನು ತಲುಪಿದೆ. ಸಾಂಪ್ರತ ಕಲ್ಯಾಣಮಂದಿರವನ್ನೇ ವಧೂಗೃಹವೆಂದು ಭಾವಿಸಬೇಕಾಗುತ್ತದೆ. ಈ ವಧೂಗೃಹದ ದ್ವಾರದೇಶದಲ್ಲಿ ಕನ್ಯಾಪಕ್ಷದವರು ಸ್ವಾಗತಕ್ಕೆ ಸಂಭಾರಗಳೊಂದಿಗೆ ಸನ್ನದ್ಧರಾಗಿ ನಗುಮೊಗದಿಂದ ನಿಂತಿದ್ದಾರೆ.

ಮುಂದೆ ನಿಂತ ಪುರೋಹಿತರು ವರನನ್ನು ಪ್ರಾಙ್ಮುಖನನ್ನಾಗಿ ನಿಲ್ಲಿಸುತ್ತಾರೆ. ಸುವಾಸಿನಿಯರಿಂದ ನೀರಾಜನ ಹಾಗೂ ದೃಷ್ಟಿನೀವಾಳಿಸುವಿಕೆ ನಡೆಯುತ್ತದೆ. ಇದನ್ನು **ಕದಿರಾರ್ತಿ** ಎನ್ನುತ್ತಾರೆ. ಕನ್ಯಾಪಿತ ವರಪಕ್ಷದ ಹಿರಿಯರನ್ನೆಲ್ಲಾ ಗಂಧಪುಷ್ಪಾದಿಗಳಿಂದ ಗೌರವಿಸುತ್ತಾನೆ. ಕನ್ಯಾಮಾತೆಯು ವರಪಕ್ಷದ ಸ್ತ್ರೀಯರನ್ನು ಗಂಧೋದಕ, ಕುಂಕುಮ, ಪುಷ್ಪಾದಿಗಳಿಂದ ಗೌರವಿಸುತ್ತಾಳೆ. ಪರಸ್ಪರರು ಲಾಜವೃಷ್ಟಿಗೈಯ್ಯುತ್ತಾರೆ. ಹಿರಿಯರನ್ನು ಒಳಗೆ ಬರಮಾಡಿಕೊಳ್ಳಲಾಗುತ್ತದೆ. ಈಗ ಕನ್ಯಾಪಿತನು ತನ್ನ ಪತ್ನಿ ಸುರಿದ ನೀರಿನಿಂದ ವರನ ಪಾದ ತೊಳೆಯುತ್ತಾನೆ. ವರನಲ್ಲಿ ಶ್ರೀಪತಿಯ ಚಿಂತನೆ ಕನ್ಯಾಪಿತನಲ್ಲಿದೆ. **ಗೃಹಮಭ್ಯಾಗತೋ ಗುರುಃ** ಎಂಬ ಭಾವವಿದೆ. '**ಕನ್ಯಾರ್ಥೀ ಹರಿವತ್ ಪೂಜ್ಯಃ**' ಎಂಬ ಮಾತಿನ ಪ್ರಾಮಾಣಿಕ ಅನುಷ್ಠಾನವಿದೆ.

ಭಾವಿಮಾವ ಭಾವಿಅಳಿಯನ ಕೈಹಿಡಿದು ಒಳಕ್ಕೆ ಕರೆತರುತ್ತಾನೆ. ಕುಳ್ಳಿರಿಸಿ ಬೀಸಣಿಕೆಯಲ್ಲಿ ಗಾಳಿ ಹಾಕಿ ಉಪಚರಿಸುತ್ತಾನೆ. ಇದೀಗ ವರ ಮಾವನ ಮುಂದೆ ಮೊದಲಬಾರಿಗೆ ಬಾಯಿ ತೆರೆದು 'ಕನ್ಯಾರ್ಥೀ' ಎನ್ನುತ್ತಾನೆ. ಮಾವ 'ಸ್ವಾಗತಮ್' ಎನ್ನುತ್ತಾನೆ. ಒಮ್ಮೆ ಸಾಕಾಗದಿದ್ದರೆ ಮೂರು ಬಾರಿ ಈ ವಚನ ಪ್ರತಿವಚನಗಳು ನಡೆಯುತ್ತವೆ. ಇವನ ಕೈಲಿದ್ದ ಬಿದರುಕೋಲನ್ನು ಗಮನಿಸಿದ ಮಾವ ಈ ದಂಡ ತೆಗೆದಿಡಲೇ? ಎಂದು ಸಭೆಯಲ್ಲಿ ಅನುಜ್ಞೆ ಕೋರುತ್ತಾನೆ. ಸಭೆ 'ಆಮ್' ಎನ್ನುತ್ತದೆ. ಈತ ದಂಡವನ್ನು ಪಡೆದು ಮಂಟಪದ ಮೇಲೆ ಪ್ರಾಗಗ್ರವಾಗಿ ತೆಗೆದಿರಿಸುತ್ತಾನೆ.

ದಂಡವಿಲ್ಲದವನ ಬಾಳು ದಂಡ. ದಂಡವೆಂದರೆ ಸ್ವಾತ್ಮನಿಯಂತ್ರಣ.

ಬ್ರಹ್ಮಚಾರಿಗೆ ಪಾಲಾಶದಂಡ ಅಥವಾ ಅಶ್ವತ್ಥದಂಡ. ಪಲಾಶದ ದೇವತೆ ಚಂದ್ರ. ಅಶ್ವತ್ಥಕ್ಕೆ ಬೃಹಸ್ಪತಿ. ಒಬ್ಬ ಮನಸ್ಸಿನ ದೇವತೆ. ಇನ್ನೊಬ್ಬ ವೇದದ ದೇವತೆ.

ಗೃಹಸ್ಥನಿಗೂ ಸನ್ನ್ಯಾಸಿಗೂ ಬಿದಿರಿನ ದಂಡ. ಬಿದಿರು ದಿನಕಳೆದಂತೆ ಗಟ್ಟಿಗೊಳ್ಳುವ ಅಗ್ನಿವೃಕ್ಷ. ಹಾಗಾಗಿಯೇ ಹಳೆ ಬಿದಿರುಗಳು ಘರ್ಷಿಸಿ ಬೆಂಕಿ ಹುಟ್ಟಿ ದಾವಾಗ್ನಿ ಉದ್ಭವಿಸುತ್ತದೆ.

ಅಗ್ನಿ ಮಾತಿನ ದೇವತೆ. ಪರರನ್ನು ಹಿಂಸಿಸುವವರಿಗೆ ಮುಖ್ಯಸಾಧನ ಮಾತು. ವಿದ್ಯಾವಂತರಲ್ಲಿ ನಿಯಂತ್ರಣವಿಲ್ಲದ ಮಾತಿದ್ದರೆ ಅದು ಇನ್ನೂ ಭಯಾನಕ. ಅದಕ್ಕಾಗಿಯೇ ವಿದ್ಯೆ ಮುಗಿಸಿ ಸ್ನಾನ ಮಾಡಿದ ಈತ ಸಮಾವರ್ತನೆಯಂದೇ ವೇಣು ದಂಡವನ್ನು ಹಿಡಿದಿದ್ದಾನೆ. **'ವೇಣುರಸಿ, ವಾನಸ್ಪತ್ಯೋಽಸಿ ಸರ್ವತೋ ಮಾ (ಮಾಂ) ಪಾಹಿ'** 'ವನಸ್ಪತಿಯಾದ ವೇಣು ನೀನು. ಎಲ್ಲೆಡೆಯಿಂದ ಎನ್ನನ್ನು ಪೊರೆ' ಎಂಬ ಮಂತ್ರದೊಂದಿಗೆ ಧರಿಸಿದ ವೈಣವದಂಡ ಈತನ ಮಾತಿನ ನಿಯಮನದ ಸಂಕೇತ. ವಾಙ್ನಿಯಂತ್ರಣದ ಮೂಲಕ ಅಭಯದಾನವನ್ನು ಸಂಕೇತಿಸಿದೆ ಬಿದಿರಕೋಲು.

ವರನ ಘನತೆಗೊಂದು ಬಿನ್ನಾಣವೂ ಹೌದು ಈ ಕೇಶಪರಿಮಿತ ಕೋಲು. ನಮ್ಮ ಮನೆಗೆ ಬಂದು ಸೇರಿದ ಮೇಲೆ ಸಾಕು ನಿಮ್ಮ ಘನತೆಯ ಬಿನ್ನಾಣ. ನಮ್ಮೊಂದಿಗೆ ನಮ್ಮವರಾಗಿ ಸಲುಗೆಯಿಂದ ಬೆರೆಯಿರಿ ಎಂಬ ಭಾವದಿಂದಲೋ ಏನೋ! ಮಾವ ಇವನ ದಂಡವನ್ನು ಬದಿಗಿರಿಸಿಬಿಟ್ಟ.

ದಂಡ ಅತ್ತ ಸರಿದದ್ದೇ ತಡ, ವರನನ್ನು ಸಿಹಿಹಾಲಿನೊಂದಿಗೆ ಅತ್ತೆ ಸಮೀಪಿಸಿದ್ದಾಳೆ. ಈತ ಸಂಕೋಚ ಸೌಜನ್ಯಗಳಿಂದ ಹಾಲನ್ನು ಪೂರ್ತಿ ಕುಡಿಯಲಾಗದೆ ಪಾತ್ರೆಯಲ್ಲೇ ಸ್ವಲ್ಪ ಉಳಿಸಿಬಿಟ್ಟ. ಇದೇ ಸಶೇಷಪಾನ. 'ನಾನು ಪೂರ್ತಿ ಖಾಲಿಮಾಡುವವನಲ್ಲ. ಉಳಿಸುವವ' ಎಂದು ಅತ್ತೆಗೆ ಅಭಯವಿತ್ತಿದ್ದಾನೆ.

## ಸಭಾಪೂಜೆ

ಇತ್ತ ಸಭೆಯಲ್ಲಿ ಉಭಯಪಕ್ಷದ ಹಿರಿಯರು ಕುಳಿತಿದ್ದಾರೆ. ವಧೂಪಿತನು ತನ್ನ ತಂದೆ, ಅಣ್ಣ ಮುಂತಾದ ಹಿರಿಯರೊಂದಿಗೆ ಸಭಾಪೂಜೆಗಾಗಿ ಸಂಕಲ್ಪಿಸುತ್ತಾನೆ. 'ಸಭೆಯಲ್ಲಿ ದೇವಾಧಿದೇವತೆಗಳೂ ಅವ್ಯಕ್ತಗತಿಯಿಂದ ಸನ್ನಿಹಿತರಾಗಿದ್ದಾರೆ' ಎಂದು ಭಾವಿಸುತ್ತ **'ನಮಃ ಸದಸೇ ನಮಃ ಸದಸಸ್ಪತಯೇ'** ಎಂಬ ವೈದಿಕಮಂತ್ರಗಳಿಂದ

ಕೈಮುಗಿಯುತ್ತಾನೆ. ಸುಗಂಧೋದಕ, ವ್ಯಜನಗಳಿಂದ ಉಪಚರಿಸುತ್ತಾನೆ. ದ್ರವ್ಯೋಪ-ಚಾರಗಳಿಂದ ಹೆಚ್ಚು ಪ್ರಭಾವಶಾಲಿಯಾದುದು ವಾಗುಪಚಾರ. ಬಂದವನನ್ನು ಎರಡು ಮಾತಿನಿಂದ ಹೊಗಳಿದಾಗ ಆತನಿಗಾಗುವ ಆನಂದ ಬೆಲ್ಲನೀರಿನಿಂದ ಸಿಗಲಾರದು. ಹೊಗಳುವುದಕ್ಕೆ ಇರುವ ಗುಣಗಳೇ ಆಗಬೇಕೆಂದಿಲ್ಲ. ಅಸತ್ಯಸ್ತವನ ದೇವರ ವಿಷಯದಲ್ಲಿ ಮಾತ್ರ ದೋಷ. ಹಾಗಾಗಿ ಸಭಾಪೂಜಾಪ್ರಯೋಗಗಳಲ್ಲಿ ಯಜಮಾನನ ಮಾತುಗಳು ಹೀಗಿವೆ --

''ತಾವೆಲ್ಲಾ ಎಲ್ಲವನ್ನೂ ಬಲ್ಲವರು. ಇಡಿಯ ದೇಶದಲ್ಲಿ ಪ್ರಸಿದ್ಧಿ ಪಡೆದವರು. ನಾನೋ ಅತ್ಯಲ್ಪ. ರಸತುಂಬಿದ ಮಾತಿನಲ್ಲಿ ಚತುರನಲ್ಲ. ಹಾಗಿದ್ದೂ ಎರಡು ಮಾತುಗಳನ್ನಾಡುತ್ತೇನೆ. ದಯವಿಟ್ಟು ಕಿವಿಗೆ ಹಾಕಿಕೊಳ್ಳಿ. ಮಗುವಿನ ತೊದಲನ್ನೂ ಕೇಳಿ ಖುಷಿಪಡುವ ಕರುಣಾಳುಗಳಲ್ಲವೇ ತಂದೆತಾಯಿಯರು.

ಜಲಧಿಯಲ್ಲಿ ಗಾಂಭೀರ್ಯವಿದೆ. ಹಿಮಾಲಯದಲ್ಲಿ ಸ್ಥೈರ್ಯವಿದೆ. ಬಾನಮಣಿಯಲ್ಲಿ ತೇಜಸ್ಸಿದೆ. ಭೀಷ್ಮನಲ್ಲಿ ಶೌರ್ಯವಿದೆ. ಬೃಹಸ್ಪತಿಯಲ್ಲಿ ನೀತಿಯಿದೆ. ಕರ್ಣನಲ್ಲಿ ತ್ಯಾಗಬುದ್ಧಿಯಿದೆ. ಅವರಲ್ಲೆಲ್ಲಾ ಒಂದೊಂದೇ ಗುಣ. ನಿಮ್ಮಲ್ಲಾದರೋ ಮೇಲ್ಕಂಡ ಎಲ್ಲಾ ಗುಣಗಳು ತುಂಬಿವೆ. ಸುಳ್ಳಲ್ಲ. ಇಂತಹ ಗುಣಬೃಂಹಿತರಾದ ತಮ್ಮನ್ನು ಅಲ್ಪನಾದ ನಾನೇನು ಸ್ತುತಿಸಬಲ್ಲೆ? ಆ ಸಾಮರ್ಥ್ಯ ಯಾರಿಗಿದೆ''.

**ಭವಂತಃ ಸರ್ವಜ್ಞಾಃ ಸಕಲಭುವನೇ ರೂಢಯಶಸೋ**
**ಅಹಂ ತಾವದ್ಬಾಲಃ ಸರಸವಚನೇ ನೈವ ನಿಪುಣಃ ।**
**ತಥಾಪೀಯಂ ವಾಣೀ ವಿಶತು ಭವತಾಂ ಕರ್ಣಕುಹರೇ**
**ಕಿಶೋರಸ್ಯಾಲಾಪಃ ಖಲು ಭವತಿ ಪಿತ್ರೋರತಿಮುದೇ ॥**

**ಗಾಂಭೀರ್ಯಂ ಜಲಧೌ ಸ್ಥಿರತ್ವಮಚಲೇ ತೇಜೋಽಧಿಕಂ ಭಾಸ್ಕರೇ**
**ಶೌರ್ಯಂ ಶಾಂತನವೇ ನಯಃ ಸುರಗುರೌ ತ್ಯಾಗಸ್ತು ಸೂರ್ಯಾತ್ಮಜೇ ।**
**ಏಕೈಕೋ ಗುಣ ಏವ ತೇಷು ನಿಹಿತೋ ಯುಷ್ಮಾಸು ಸರ್ವೇ ಗುಣಾಃ**
**ತಿಷ್ಠಂತ್ಯೇವ ಧರಾಮರಾನ್ ಭುವಿವರಾನ್ ಕಃ ಸ್ತೋತುಮೀಶಃ ಕ್ಷಿತೌ ॥**

ಇಂತಹ ಹತ್ತು ಹಲವು ಮಾತುಗಳಿಂದ ಸಭೆಯನ್ನು ಸ್ತುತಿಸಿ ಸುವಾಸಿನಿಯರ ಮೂಲಕ ಕಜ್ಜಾಯವನ್ನು ಸಭೆಗೆ ಹಂಚಿಸುತ್ತಾನೆ. ಅಭ್ಯಾಗತರನ್ನು ಪ್ರತ್ಯೇಕವಾಗಿ ಕೈಮುಗಿದು ಮಾತನಾಡಿಸಿ ವಾಗ್ದಾನಕ್ಕೆ ಅನುಮತಿ ಕೇಳುತ್ತಾನೆ.

## ವಾಗ್ದಾನ

ಕನ್ಯಾದಾತೃವು ವರಪಕ್ಷೀಯರಿಗೆ 'ಮಾತುಕೊಡುವುದು' ವಾಗ್ದಾನ.

ಲಗ್ನಪತ್ರಿಕೆಯ (ನಿಶ್ಚಿತಾರ್ಥದ) ದಿನದಂದು ಸಾಂಕೇತಿಕವಾಗಿ ನಡೆದಿದ್ದ ವಾಗ್ದಾನ ಇಂದು ಶಾಸ್ತ್ರೀಯವಾಗಿ ನಡೆಯುತ್ತದೆ.

ಮೊದಲು ಮನಸ್ಸಿನಿಂದ ಕೊಡಬೇಕು. ನಂತರ ಮಾತಿನಿಂದ. ಮುಂದೆ ಕೈಯೆತ್ತಿ ದಾನವನ್ನೀಯಬೇಕು. ಒಲ್ಲದ ಮನಸ್ಸಿನಿಂದ ತೋರಿಕೆಯ ಮಾತುಗಳಿಂದ ದಾನ ಕೊಟ್ಟೂ ಫಲವಿಲ್ಲ. ದೇವಾಗ್ನಿದ್ವಿಜಸನ್ನಿಧಿಯಲ್ಲಿ ಮಾತು ಕೊಡುವುದರಿಂದ ಮನೋ-ವಾಕ್ಕಾಯಗಳೆಂಬ ತ್ರಿಕರಣಗಳು ಒಂದಾಗಿ ಬೆಸೆಯುತ್ತವೆ.

ವರಪಕ್ಷದವರು ಪೂರ್ವಾಭಿಮುಖಿಯಾಗಿ ಕುಳಿತ ನವವಧುವಿನ ಕೈಯ್ಯಲ್ಲಿ ಫಲವಿತ್ತು 'ಈಕೆಯನ್ನೇ ನಮ್ಮ ಹುಡುಗನಿಗೆ ಭಾರ್ಯೆಯನ್ನಾಗಿ ಕೊಡಬೇಕಾಗಿ ಕೇಳು-ತ್ತೇವೆ' ಎಂಬರ್ಥದಲ್ಲಿ **ವೃಣೀಮಹೇ** ಎನ್ನುತ್ತಾರೆ. ಈ ಮಾತಿಗೆ ಉತ್ತರವಾಗಿ ಕನ್ಯಾ-ದಾತೃವು **ವೃಣೀಧ್ವಮ್** 'ಅವಶ್ಯ ಕೇಳಿರಿ' ಎನ್ನುತ್ತಾನೆ.

'ತ್ರಿಪುರುಷರ ಹೆಸರಿನೊಂದಿಗೆ ಗೋತ್ರಪ್ರವರ ಹೇಳಿ ಕನ್ಯೆಯ ವರಣ ಮಾಡಬೇಕು' ಎಂಬ ಸ್ಮೃತಿವಚನದ ಪ್ರಕಾರ ವರಣ ನಡೆಯುತ್ತದೆ. ಇಂತಹ ಪ್ರವರದ ಈ ಗೋತ್ರದಲ್ಲಿ ಜನಿಸಿದ ಇಂತಹವರ ಮರಿಮಗ ಇಂತಹವನ ಮೊಮ್ಮಗ ಇಂತಹ ನನ್ನ ಮಗನಾದ ಶ್ರೀಧರಸ್ವರೂಪಿಯಾದ ಈ ಹೆಸರಿನ ವರನಿಗೋಸ್ಕರ ಈ ಪ್ರವರದ ಗೋತ್ರದಲ್ಲಿ ಹುಟ್ಟಿದ ಇಂತಹವರ ಪ್ರಪೌತ್ರಿ , ಇಂತಹವರ ಪೌತ್ರಿ , ಈ ಹೆಸರಿನ ನನ್ನ ಮಗಳಾದ ಶ್ರೀರೂಪಿಣಿಯಾದ ಈ ಹೆಸರಿನ ಕನ್ಯೆಯನ್ನು ಧರ್ಮಪ್ರಜಾಸಂಪತ್ತಿಗಾಗಿ ಭಾರ್ಯೆಯಾಗುವಂತೆ ವರಣ ಮಾಡುತ್ತೇವೆ'' ಎಂಬ ಕ್ರಮದಲ್ಲಿ ವರಣೆ ನಡೆದಾಗ ಕನ್ಯಾದಾತೃವು ವಾಗ್ದಾನ ಮಾಡಬೇಕು. ಆದಕ್ಕಾಗಿ ಗಣೇಶನನ್ನು ಪೂಜಿಸಿ ಶಚಿಯನ್ನೂ ಪೂಜಿಸುತ್ತಾನೆ. ಇಂದ್ರಾಣಿಯಾದ ಶಚಿ ವಿವಾಹಭಾಗ್ಯದ ದೇವತೆ. **ಆಸು ನಾರಿಷು ಸುಭಗಾಂ** ಎಂಬ ವೇದ ಎಲ್ಲಾ ನಾರಿಯರಲ್ಲಿ ಈಕೆ ಸೌಭಾಗ್ಯಶಾಲಿ ಎನ್ನುತ್ತಿದೆ. ಕನ್ಯೆಯನ್ನು ದಾನ ಮಾಡುವಾಗ ಧರಿಸಬೇಕಾದ ಧಾರೆಸೀರೆಯನ್ನೂ, ಮಾಂಗಲ್ಯವನ್ನೂ ಇಲ್ಲಿ ಇಂದ್ರಾಣಿಗೆ ಹೊದಿಸಿ ನಿವೇದಿಸಲಾಗುತ್ತದೆ. ಕನ್ಯೆ ಶಚಿಯನ್ನು ಪ್ರಾರ್ಥಿಸುತ್ತಾಳೆ. ''ಓ ದೇವೇಂದ್ರನ ಮನದನ್ನೆ! ನಿನಗೆ ನಮಸ್ಕಾರ. ನೀನು ದೇವೇಂದ್ರನ ಹಿತೈಷಿಣಿ. ಆತನ ಇಂಗಿತಕ್ಕೆ ಅನುಗುಣವಾಗಿ ನಡೆಯುವವಳು. ನನಗೆ ವಿವಾಹಭಾಗ್ಯವನ್ನೂ ವಿವಾಹಾನಂತರದ ಮಾಂಗಲ್ಯದ ಮುತ್ತೈದೆ ಭಾಗ್ಯವನ್ನೂ, ಪುತ್ರಾದಿ ಪ್ರಾಪ್ತಿಯನ್ನೂ ಅನುಗ್ರಹಿಸು''.

**ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾವಿ(ಮಿ)ನಿ।**
**ವಿವಾಹ(ಹಂ)ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ॥**

ವಿವಾಹದೇವತೆಯಾದ ಇಂದ್ರಾಣಿಯ ಅನುಗ್ರಹವನ್ನು ಪ್ರಾರ್ಥಿಸಿ ಕನ್ಯಾಪಿತೃ ವಾಗ್ದಾನ ಮಾಡುತ್ತಾನೆ ''ಈ ನನ್ನ ಕನ್ಯೆಯನ್ನು ಜ್ಯೋತಿಷ್ಕರು ನಿರ್ಧರಿಸಿದ ಸುಮು-ಹೂರ್ತದಲ್ಲಿ ಈ ವರನಿಗೆ ಕೊಡುವವನಿದ್ದೇನೆ. ಇದೀಗ ಮಾತಿನಿಂದ ಕೊಟ್ಟು ಬಿಟ್ಟಿದ್ದೇನೆ'' **ಸುಮುಹೂರ್ತೇ ದಾಸ್ಯೇ ವಾಚಾ ಸಂಪ್ರದದೇ.** ಅಲ್ಲದೇ ಎದ್ದು ನಿಂತು ಸಭೆಯನ್ನು ಕುರಿತು ಉದ್ಘೋಷಿಸುತ್ತಾನೆ. ''ಯಾವುದೇ ಜ್ಯೌತಿಷ ಅಂಗಗಳ ವಿಕಲತೆ-ಯಿಲ್ಲದ, ಪಾತಿತ್ಯದೋಷವಿಲ್ಲದ, ಕ್ಲೀಬವೂ ಅಲ್ಲದ, ಪ್ರಮುಖವಾದ ಮುಹೂರ್ತ-ದೋಷಗಳೆನಿಸಿದ ತಿಥಿದೋಷ, ವಾರದೋಷ, ಕ್ರೂರವಿದ್ಧಾದಿನಕ್ಷತ್ರದೋಷ, ಮಹಾಪಾತವೈಧೃತಿದೋಷ, ವಿಷಘಟೀದೋಷ, ಲಗ್ನದೋಷ, ಭೃಗುಷಟ್ಕದೋಷ, ಕುಜಾಷ್ಟಮದೋಷ, ಲತ್ತಾದೋಷ, ವಿಷ್ಟಿದೋಷಗಳೆಂಬ ದಶದೋಷರಹಿತವಾದ ಶುಭಮುಹೂರ್ತದಲ್ಲಿ ಈ ಕನ್ಯೆಯನ್ನು ದೇವ, ಅಗ್ನಿ, ದ್ವಿಜಸನ್ನಿಧಿಯಲ್ಲಿ ಧಾರೆಯಿತ್ತು ದಾನ ಕೊಡುವವನಿದ್ದೇನೆ''.

**ಅವ್ಯಂಗೇಽಪತಿತೇಽಕ್ಲೀಬೇ ದಶದೋಷವಿವರ್ಜಿತೇ।**
**ಇಮಾಂ ಕನ್ಯಾಂ ಪ್ರದಾಸ್ಯಾಮಿ ದೇವಾಗ್ನಿದ್ವಿಜಸನ್ನಿಧೌ॥**

ಅವ್ಯಂಗೇ ಮುಂತಾದ ವಿಶೇಷಣಗಳನ್ನು ವರನಿಗೂ ಹೊಂದಿಸಿ ದಶದೋಷ-ಗಳೆಂದರೆ ಹತ್ತಾರು ದೋಷಗಳೆಂದರ್ಥೈಸಿದ್ದೂ ಇದೆ. ಆಗ ಸಪ್ತಮೀ ವಿಭಕ್ತಿಯ ಹೊಂದಿಕೆ ಕ್ಲಿಷ್ಟವಾಗುತ್ತದೆ. ವ್ಯಾಕರಣದ ಆದೇಶದ ಪ್ರಕಾರ ಚತುರ್ಥಿಯೇ ಅಪೇಕ್ಷಿತ. ಹಾಗಾಗಿ 'ಸುಮುಹೂರ್ತೇ ದಾಸ್ಯೇ' ಎಂಬ ಹಿಂದಿನ ಮಾತಿನ ಮುಹೂರ್ತಕ್ಕೆ ಇದು ವಿಶೇಷಣ.

ವರನ ಪಿತನೂ ಎದ್ದು ನಿಂತು 'ಈ ವರನ ಬಗ್ಗೆ ಈ ನಿಶ್ಚಯಕ್ಕೆ ನಾವೂ ಬದ್ಧ; ನಿಶ್ಚಿಂತೆಯಿಂದಿರೋಣ' ಎನ್ನುತ್ತಾ ತಾಂಬೂಲಅಡಿಕೆಗಳನ್ನು ಕನ್ಯಾದಾತೃವಿನ ಉತ್ತರೀಯ-ದಲ್ಲಿಡುತ್ತಾನೆ. ವಾಗ್ದಾನಕ್ಕೆ ಸಾಕ್ಷಿಗಳಾದ ವಿಪ್ರರಿಗೆ ಪೂಜೆ-ಪುರಸ್ಕಾರಗಳೊಂದಿಗೆ ವಾಗ್ದಾನ ಮುಗಿಯುತ್ತದೆ.

ಇದೇ ಸಮಯದಲ್ಲಿ ವರಪಕ್ಷದಿಂದ ತಂದ ವಧೂತ್ತರೀಯವಸ್ತ್ರ(ಸೀರೆ)ವನ್ನು ಉಭಯಪಕ್ಷೀಯ ವಿಪ್ರರು ಹಿಡಿದುಕೊಂಡು ಕನ್ಯೆಯನ್ನು ವರಿಸುವ ಕನ್ಯಾವರಣ ಮಂತ್ರಗಳನ್ನು ಹೇಳಿ ಅರಿಶಿನಕೊಂಬು ಅಕ್ಷತಗಳನ್ನು ವಸ್ತ್ರದಲ್ಲಿ ಹಾಕಿ ವಸ್ತ್ರಕ್ಕೊಂದು

ಗಂಟು ಹಾಕಿ ಉತ್ತರೀಯವಸ್ತ್ರವನ್ನು ಸಿದ್ಧಗೊಳಿಸುತ್ತಾರೆ. ವಿವಾಹಮುಹೂರ್ತದ ಕಾಲದಲ್ಲಿ ವಧುವು ಈ ಉತ್ತರೀಯವನ್ನು ಧರಿಸಿ ಬರುತ್ತಾಳೆ. ಈ ವಸ್ತ್ರಕ್ಕೆ **ವಾಧೂಯವಸ್ತ್ರ**ವೆಂದು ಹೆಸರು. ಸೂರ್ಯಾವರ್ಗವನ್ನು ತಿಳಿದ ವ್ಯಕ್ತಿ ಈ ವಾಧೂಯವನ್ನು ಪಡೆಯುವುದಕ್ಕೆ ಅರ್ಹ. **'ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ ಸ ಇದ್ ವಾಧೂಯಮರ್ಹತಿ'** ಎಂಬುದಾಗಿ ಸೂರ್ಯಾವರ್ಗವೇ ತಿಳಿಸಿದೆ.

ಈ ವಾಗ್ದಾನದ ತನಕದ ಕೆಲಸ ವಿವಾಹಪೂರ್ವಭಾವಿಯಾದುದು. ಹಾಗಾಗಿ ಈ ಕೆಲಸಗಳನ್ನು ವಿವಾಹಮಂಟಪದಿಂದ ಹೊರಭಾಗದಲ್ಲಿ ನಡೆಸುತ್ತಾರೆ. ಕುಂದಾಪುರ ಕಡೆಯ ವಿಪ್ರರು ಇಂದಿಗೂ ಮಂಟಪದ ಹೊರಗೇ ವಾಗ್ದಾನಪರ್ಯಂತ ಕೆಲಸ ನಡೆಸಿ ಮಧುಪರ್ಕಾದಿ ವರಪೂಜೆಗೆ ಮಂಟಪ ಪ್ರವೇಶಿಸುತ್ತಾರೆ. ಉಳಿದೆಡೆ ಮಂಟಪದ ಒಳಗಾದರೇನು? ಹೊರಗಾದರೇನು? ಎಂಬ ಭಾವವಿದೆ.

## ವಿವಾಹಮಂಟಪ

ವೇದಿಕೆಯ ಮಧ್ಯೆ ವಿವಾಹಮಂಟಪ ಸಿದ್ಧವಾಗಿದೆ. ನಾಲ್ಕು ಕಂಬಗಳು. ಚತುರ್ದ್ವಾರಗಳು, ಕಂಬಗಳಿಗೆ ಸುತ್ತಿದ ತಳಿರುತೋರಣ ಹೂಮಾಲೆಗಳು, ಹಂಸಗಿಣಿಗಳಿಂದ ಚಿತ್ರಿತವಾದ ಅಡ್ಡಗಳು. ಪೂರ್ವದ್ವಾರದಲ್ಲಿ ಬಿಗಿದ ಪೂರ್ವದೆಡೆಗೆ ಬಾಗಿದ ಎರಡು ಬಾಳೆಕಂಬ. ಎರಡೂಕಡೆ ಸುವಾಸಿನಿಯರಿಂದ ಬೆಳಗಿದ ಪಂಚದೀಪ. ಮಂಟಪದ ನಾಲ್ಕೂ ಕಡೆ ವರ್ಣಚಿತ್ರಿತ ಕಲಶಗಳು. ಮಧ್ಯೆ ಯಜ್ಞವೇದಿ. ಇಂದಿನ ಕಾಲದಲ್ಲಂತೂ ಬಣ್ಣದ ಕಾಗದ ವಿದ್ಯುದ್ದೀಪಗಳಿಂದ ಝಗಝಗಿಸುವ ಮಂಟಪವಿದು. ಮಾತಾಪಿತೃಗಳು ಕನ್ಯೆ ಹಾಗೂ ಪುರೋಹಿತರೊಂದಿಗೆ ಈ ವೇದಿಕೆಯನ್ನು ಪ್ರವೇಶಿಸುತ್ತಾರೆ. ಕನ್ಯಾದಾನಾಂಗ ಪುಣ್ಯಾಹವಾಚನವನ್ನು ಮಾಡಿಸಿ ಮಂಟಪವನ್ನು ಪ್ರೋಕ್ಷಿಸುತ್ತಾರೆ. ಇದು ವಿವಾಹ ಮಂಟಪದಲ್ಲಿ ನಡೆಯುವ ಮೊದಲ ಪುಣ್ಯಾಹ. ಪುಣ್ಯಾಹವಾದ ಮೇಲೆ ಅಂಕುರಾರ್ಪಣ, ಕಂಕಣಬಂಧಗಳೂ ಕೆಲವೆಡೆ ನಡೆಯುತ್ತವೆ.

ಅತ್ತ ವರನ ತಂದೆತಾಯಿಯರು ವರನೊಂದಿಗೆ ತಮ್ಮ ವಸತಿಸ್ಥಳದಲ್ಲಿ ಸ್ವಪುರೋಹಿತರಿಂದ ವಿವಾಹಾಂಗ ಪುಣ್ಯಾಹ ಮಾಡಿಸುತ್ತಾರೆ. ಪುಣ್ಯಾಹವಾದೊಡನೆ ವರಪೂಜೆಗಾಗಿ ಕರೆ ಬರುತ್ತದೆ. ವರ ವಿವಾಹಮಂಟಪಕ್ಕೆ ತರಲ್ಪಟ್ಟಿದ್ದಾನೆ.

## ಮಧುಪರ್ಕ

**ವರಪೂಜೆ** ಎನ್ನುವುದು ಇದನ್ನೇ. ಕರಾವಳಿಪ್ರದೇಶವನ್ನು ಹೊರತು ಪಡಿಸಿ

ಉಳಿದೆಡೆ ಈ ವರಪೂಜೆ ವಿವಾಹದ ಹಿಂದಿನದಿನ ರಾತ್ರಿಯೇ ನಡೆದು ಬಿಡುತ್ತದೆ. ವರಪೂಜೆಯಾಗಿ ಮಂಡಿಗೆಯ ಗಡದ್ದಿನ ಭೋಜನಸತ್ಕಾರವೂ ಇಲ್ಲಿ ನಡೆದಿರುತ್ತದೆ. ಎಲ್ಲವೂ ಸಂಪ್ರದಾಯ ನಡೆಗಳಿಗೆ ಸಂಬಂಧಪಟ್ಟ ವಿಷಯ. ಕನ್ಯಾದಾನಕ್ಕೆ ಮುಂಚೆ ವರಪೂಜೆ ನಡೆಯಬೇಕು ಎಂಬುದಷ್ಟೇ ಮುಖ್ಯ.

ವರನನ್ನು ಮನೆಗೆ ಕರೆಸಿ ಅರ್ಚಿಸಿ ಸತ್ಕರಿಸಿ ಕನ್ಯೆಯನ್ನು ದಾನನೀಡುವ ಪದ್ಧತಿಗೆ **ಬ್ರಾಹ್ಮವಿವಾಹ** ಎನ್ನುವುದು. ಅದಕ್ಕಾಗಿ ವರನಿಗೆ ಯಥಾಸಂಭವ ಉಪಚಾರಗಳನ್ನು ಕನ್ಯಾದಾತೃ ಸಲ್ಲಿಸುತ್ತಾನೆ. ಇದರಲ್ಲಿ ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ವಸ್ತ್ರ, ಪುಷ್ಪಮಾಲಾ, ಉಪವೀತದ್ರವ್ಯಾದಿಗಳು ಸೇರಿರುತ್ತವೆ.

ಈ ಉಪಚಾರಗಳಲ್ಲಿ ಮಧುಪರ್ಕಕ್ಕೇ ಪ್ರಾಧಾನ್ಯ. ಮಧುಪರ್ಕವು ಅತ್ಯಂತ ಹಿತವಾದ ಪ್ರಾಚೀನಪೇಯ. ಹಲವು ಬಗೆಯಾದ ಮಧುಪರ್ಕವಿದೆ. ಜೇನಿನ ಜೊತೆಗೆ ಅದರ ಮೂರರಷ್ಟು ಸಿಹಿಮೊಸರು ಬೆರೆಸಿ ಅಲ್ಪ ತುಪ್ಪ ಸೇರಿಸುವುದು. ಶರೀರಕ್ಕೆ ತಂಪನ್ನು ಲವಲವಿಕೆಯನ್ನು ನೀಡುವ ಮಧುಪರ್ಕ (ಲಸ್ಸೀ ಸ್ವರೂಪದ ಪೇಯ). **ದಧಿ ಮಧ್ವಾಜ್ಯಸಂಯುಕ್ತೋ ಮಧುಪರ್ಕಃ.** ಮೊಸರಿನ ಸ್ಥಾನದಲ್ಲಿ ಹಾಲನ್ನು ಬಳಸಿದಾಗಲೂ ಅದೂ ಮಧುಪರ್ಕವೇ.

ಮಾವನಿತ್ತ ಮಧುಪರ್ಕವನ್ನು ವರ ಗಕ್ಕನೆ ಕುಡಿಯುವುದಿಲ್ಲ. 'ಸರ್ವ ದೇವತೆಗಳೂ ವಿಶಾಲಪ್ರಕೃತಿಯೂ ಲೋಕಕ್ಕೆ ಮಧುದಾಯಕವಾಗಲಿ' ಎಂಬ ಪ್ರಾರ್ಥನೆಯ ವೈದಿಕಮಂತ್ರಗಳಿಂದ ಅದನ್ನು ಆತ ದಿಟ್ಟಿಸುತ್ತಾನೆ. ಪೂರ್ವಾದಿ ಕ್ರಮದಿಂದ ತನ್ನ ಸುತ್ತ ಎಂಟು ವಸುಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು ಹಾಗೂ ಹತ್ತು ವಿಶ್ವೇದೇವತೆಗಳನ್ನು ಚಿಂತಿಸಿ ಈ ಮಧುಪರ್ಕವನ್ನು ಭಕ್ಷಿಸುವಂತೆ ಬಿನ್ನವಿಸುತ್ತಾನೆ.

ಮನುಜನ ಜೀವನದ ಪೂರ್ಣಾಯುಸ್ಸು 116ವರ್ಷಗಳು. ಅದರಲ್ಲಿ ಮೂರು ಭಾಗಗಳು. 24, 44 ಹಾಗೂ 48ವರ್ಷಗಳು. ಇವು ಕ್ರಮವಾಗಿ ಗಾಯತ್ರೀ, ತ್ರಿಷ್ಟುಪ್, ಜಗತೀಛಂದಸ್ಸುಗಳ ಅಕ್ಷರ ಸಂಖ್ಯೆಗಳು.

ಈ ಪೂರ್ಣಜೀವನವೇ ಒಂದು ಯಜ್ಞ. ಯಜ್ಞದಲ್ಲಿ ಮೂರು ಸವನಗಳಿವೆ. ಪ್ರಾತಃಸವನ, ಮಾಧ್ಯಂದಿನಸವನ, ಸಾಯಂಸವನಗಳು. ಪ್ರಾತಃಸವನಕ್ಕೆ ವಸುಗಳು ದೇವತೆಗಳು. ಇವರಿಗೆ ಸಂಬಂಧಿಸಿದ ಛಂದಸ್ಸು ಗಾಯತ್ರೀ. ಇದು 24ಅಕ್ಷರದ ಛಂದಸ್ಸು. ಮನುಷ್ಯಜೀವನಯಜ್ಞದ ಪ್ರಾತಃಸವನ ಅವನ ಆರಂಭದ 24ವರ್ಷ. ಈ ವಯಸ್ಸಿಗೆ ನಿಯಾಮಕರು ವಸುಗಳು.

ಮಾಧ್ಯಂದಿನಸವನಕ್ಕೆ ತ್ರಿಷ್ಟುಪ್‌ಛಂದಸ್ಸಿನ ರುದ್ರರು ದೇವತೆಗಳು. ತ್ರಿಷ್ಟುಪ್‌ನ ಅಕ್ಷರಸಂಖ್ಯೆ 44. ಮನುಷ್ಯನ 25ನೆಯ ವಯಸ್ಸಿನಿಂದ 68ರ ತನಕದ 44ವರ್ಷಗಳು ಮಾಧ್ಯಂದಿನ ಸವನ. ಇದರ ನಿಯಾಮಕರು ಏಕಾದಶರುದ್ರರು.

ಸಾಯಂಸವನದ ದೇವತೆಗಳು ಆದಿತ್ಯರು. ಇವರಿಗೆ ಜಗತೀಛಂದಸ್ಸು. ಜಗತೀ 48 ಅಕ್ಷರವುಳ್ಳದ್ದು. ಮಾನವಜೀವನದ 69ರಿಂದ 116ರ ತನಕದ 48ವರ್ಷಗಳ ನಿಯಾಮಕರು ಈ ದ್ವಾದಶ ಆದಿತ್ಯರು.

ಮರಣವೆಂಬುದು ಜೀವನ ಯಜ್ಞದ ಅವಭೃಥಸ್ನಾನ. ನಂತರದ ಔರ್ಧ್ವದೇಹಿಕ ವಿಧಿಗಳಿಗೆ ಸಂಬಂಧಿಸಿದ ದೇವತೆಗಳು ವಿಶ್ವೇದೇವತೆಗಳು. ಇವರಿಗೆ ಶ್ರಾದ್ಧ-ದೇವತೆಗಳೆಂದೂ ಹೆಸರು.

ಈ ವಸು ರುದ್ರ ಆದಿತ್ಯ ವಿಶ್ವೇದೇವತೆಗಳ ಅನುಗ್ರಹದಿಂದ ನಮ್ಮ ಐಹಿಕ ಪಾರತ್ರಿಕ ಜೀವನ ನಡೆದಿದೆ. ಇವರನ್ನು ಇದೀಗ ವರ ಸ್ಮರಿಸಿಕೊಳ್ಳುತ್ತಾನೆ. 'ಅನ್ನದ ಸಾರವೆನಿಸಿದ ಓ ಮಧುವೇ! ನನಗೂ ನನ್ನ ವಂಶಾವಳಿಗೂ ನೀನು ಶಕ್ತಿ ತುಂಬು. ಸರ್ವಪ್ರದನಾದ ನಿನ್ನನ್ನು ನಾನು ಕುಡಿವೆ' ಎಂಬ ಅಥರ್ವಮಂತ್ರಗಳಿಂದ ಮಧುಪರ್ಕವನ್ನು ಮೂರು ಬಾರಿ ಕುಡಿಯುತ್ತಾನೆ.

ಮಧುಪರ್ಕ ಮುಗಿಸಿದ ವರ ಮಾವ ಕೊಟ್ಟ ವಸ್ತ್ರಾದಿಗಳಿಂದ ಅಲಂಕೃತನಾಗುತ್ತಾನೆ. ಸುವಾಸಿನಿಯರಿಂದ 'ಮಂಗಲಸೇಚನ' ನಡೆಯುತ್ತದೆ. ಅತ್ತ ವಧುವೂ ಸರ್ವಾಲಂಕಾರ ಭೂಷಿತಳಾಗಿದ್ದಾಳೆ. ವಾಧೂಯವಸ್ತ್ರವನ್ನು ಉತ್ತರೀಯವಾಗಿ ಧರಿಸಿದ್ದಾಳೆ. ಗೌರಿಯನ್ನು ಪೂಜಿಸಿ ಕೈಯ್ಯಲ್ಲಿ ಹಾರ ಹಿಡಿದು ಮುಹೂರ್ತಕ್ಕಾಗಿ ಕಾದಿದ್ದಾಳೆ. ಇದೀಗ ಎಲ್ಲರಲ್ಲೂ ಮುಹೂರ್ತದ ನಿರೀಕ್ಷಣೆ.

## ನಿರೀಕ್ಷಣೆ

ಲಗ್ನಪತ್ರಿಕೆಯಲ್ಲಿ ನಿರ್ಧರಿಸಿದ ಶುಭಮುಹೂರ್ತದಲ್ಲಿ ನಡೆಸಬೇಕಾದ ಮುಖ್ಯ-ಕಾರ್ಯ ಪರಸ್ಪರ ನಿರೀಕ್ಷಣೆಯೊಂದಿಗೆ ಹಾರವಿನಿಮಯ. ಮುಹೂರ್ತ ಸಮೀಪಿಸು-ತ್ತಿದ್ದಂತೆ ಅವಸರಿಸಿ ತಡಬಡಾಯಿಸಿಕೊಂಡು ಒದ್ದಾಡುವ ಹಾಗೆ ಇರಬಾರದು. ಮುಹೂರ್ತಕಾಲವನ್ನು ಗಮನದಲ್ಲಿಟ್ಟುಕೊಂಡು ಪೂರ್ವಭಾವಿಕಾರ್ಯಗಳನ್ನು ಹೊತ್ತಿಗೆ ಮುಂಚೆಯೇ ಮುಗಿಸಿಕೊಂಡು ಮುಹೂರ್ತದ ನಿರೀಕ್ಷೆಯಲ್ಲಿರಬೇಕು. ಈ ಅರ್ಥದಲ್ಲೂ ಇದಕ್ಕೆ ನಿರೀಕ್ಷಣೆ ಎಂದು ಹೆಸರು. ಈ ಹೊತ್ತಿಗೆ ವಧೂವರರು

ಪೂರ್ವಪಶ್ಚಿಮಮುಖವಾಗಿ ಪರಸ್ಪರ ಅಭಿಮುಖವಾಗಿ ನಿಂತಿದ್ದಾರೆ. ಅಂತಃಪಟವೊಂದು ಇವರ ಮಧ್ಯದಲ್ಲಿ ತೆರೆಯಾಗಿದೆ. ಕನ್ಯಾದಾತೃ ಲಗ್ನಸುಲಗ್ನತೆಗಾಗಿ ನವಗ್ರಹಧಾನ್ಯ ಫಲತಾಂಬೂಲಾದಿಗಳನ್ನು ದಾನವಿತ್ತಿದ್ದಾನೆ. ಮುಹೂರ್ತದೋಷನಿಮಿತ್ತ ವಿಹಿತ ದಾನಗಳನ್ನಿತ್ತಿದ್ದಾನೆ. ಮುಹೂರ್ತವಿಟ್ಟು ಕೊಟ್ಟ ಜ್ಯೋತಿಷಿಕರಿಗೂ ಮುಹೂರ್ತದಕ್ಷಿಣೆ ಇತ್ತು ನಮಸ್ಕರಿಸಿದ್ದಾನೆ. ಗ್ರಾಮಣಿಗಳಿಗೆ ಇಲ್ಲವೇ ಗುರುಪೀಠಕ್ಕೆ ಗೌರವ ಸಲ್ಲಿಸಿದ್ದಾನೆ.

ಮುಹೂರ್ತದ ಶುಭಕಾಲ ಸಮೀಪಿಸಿದೆ. ವಧೂವರರು ತಮ್ಮ ತಮ್ಮ ಕುಲದೇವತೆಯನ್ನು ಧ್ಯಾನಿಸಿಕೊಂಡು ನಿಂತಿದ್ದಾರೆ. ಕೈಯ್ಯಲ್ಲಿ ಬೆಲ್ಲ ಜೀರಿಗೆ ಅಕ್ಷತೆಗಳನ್ನೂ ಪರಿಮಳಭರಿತ ಹೂಹಾರವನ್ನೂ ಧರಿಸಿದ್ದಾರೆ. ಮಂಗಲಾಷ್ಟಕಗಳ ಸೂರ್ಯವರ್ಗ ಮಂತ್ರಗಳ ಉದ್ಘೋಷ ವಿಪ್ರವೃಂದದಿಂದ. ಸ್ತ್ರೀಯರು ಲಕ್ಷ್ಮೀಶೋಭನಪದಗಳನ್ನು ಹಾಡುತ್ತಿದ್ದಾರೆ. ವಾದ್ಯಘೋಷ ಮುಗಿಲು ಮುಟ್ಟಿದೆ. ಅಂತಃಪಟ ಉತ್ತರದೆಡೆಗೆ ಸರಿಯುತ್ತಿದ್ದಂತೆ ವಧೂ ಪುಷ್ಪಮಾಲೆಯನ್ನು ವರನ ಕಂಠದಲ್ಲಿ ಹಾಕಿದ್ದಾಳೆ. ಗುಡಜೀರಕಾಕ್ಷತೆಗಳನ್ನು ಆತನ ಶಿರದಲ್ಲಿ ಚೆಲ್ಲಿದ್ದಾಳೆ. ವರನೂ ಬಲಕೈಯ್ಯಿಂದ ಆಕೆಗೆ ಮಾಲೆ ಹಾಕಿದ್ದಾನೆ. ಪರಸ್ಪರ ದೃಷ್ಟಿಕೊಟ್ಟು ನೋಡಿಕೊಳ್ಳುತ್ತಾರೆ. ಈ ಪರಸ್ಪರ ನಿರೀಕ್ಷಣೆಯೇ ವಿವಾಹಕರ್ಮದ ಪ್ರಮುಖಭಾಗ. ವಿಪ್ರಬಂಧುವರ್ಗವೆಲ್ಲಾ ವಧೂವರರ ಮೇಲೆ ಅಕ್ಷತೆ ಹಾಕಿ 'ಸುಮುಹೂರ್ತೋಽಸ್ತು' ಎನ್ನುತ್ತದೆ.

ವರ ಆಕೆಯನ್ನು ನೋಡುತ್ತಾ ಒಂದು ಮಂತ್ರ ಹೇಳುತ್ತಾನೆ. ''ಓ ವರುಣದೇವ! ಈಕೆ ನನ್ನ ಅಣ್ಣ ತಮ್ಮಂದಿರಲ್ಲಿ ಒಡಕು ಹುಟ್ಟಿಸುವ ಹೆಣ್ಣಾಗದಂತೆ ಸಂರಕ್ಷಿಸು. ಓ ಬೃಹಸ್ಪತೇ! ಪತಿಯ ಕೆಡುಕನ್ನೆಂದೂ ಈಕೆ ಬಯಸದಿರಲಿ. ಓ ಇಂದ್ರದೇವ! ಈಕೆ ಮಕ್ಕಳನ್ನು ಮಮತೆಯಿಂದ ಬೆಳೆಸಲಿ, ಓ ಸವಿತೃದೇವ! ಈಕೆಗೆ ಸೌಭಾಗ್ಯವಿತ್ತು ಪೊರೆ''.

**ಅಭ್ರಾತೃಘ್ನೀಂ ವರುಣ, ಅಪತಿಘ್ನೀಂ ಬೃಹಸ್ಪತೇ,**
**ಇಂದ್ರ ಅಪುತ್ರಘ್ನೀಂ, ಲಕ್ಷ್ಮೀಂ ತಾಮಸ್ಯೈ ಸವಿತಃ ಸುವ ॥**

ಆಕೆ ಇವನನ್ನು ನಿರೀಕ್ಷಿಸುತ್ತಿದ್ದಂತೆ ಸೂರ್ಯವರ್ಗದ ಮಂತ್ರವೊಂದನ್ನು ಅನು-ಸಂಧಾನ ಮಾಡಿಕೊಳ್ಳುತ್ತಾನೆ.

**ಅಘೋರಚಕ್ಷುರಪತಿಘ್ನ್ಯೇಧಿ.....** ಮನೆ ಮನಗಳಿಗೆ ಬಂದು ಸೇರಿದ ಲಕ್ಷ್ಮೀ ನೀನು. ನಿನ್ನ ದೃಷ್ಟಿ ಎಂದೂ ಘೋರವಾಗದಿರಲಿ. ಚಂದಿರನ ತಿಂಗಳಿನ ಬೆಳಕಿನಂತಹ ನಿನ್ನ ಚೆಲು ನೋಟದಿಂದ ಪತಿಯನ್ನೂ, ಪತಿಗೃಹವನ್ನೂ ಬೆಳಗಿಸುತ್ತಾ ವೃದ್ಧಿ ಹೊಂದು. ಮನೆಯ ಹಸು-ಕರುಗಳಿಗೆ ಮಂಗಳಕರಳಾಗು. ನಿನ್ನ ಮನಸ್ಸು ಭಕ್ತಿ, ಪ್ರೀತಿ, ವಾತ್ಸಲ್ಯ-

ಗಳಿಂದ ಉನ್ನತವಾಗಲಿ. ಧೀರರನ್ನೂ ಜ್ಞಾನಿಗಳನ್ನೂ ಹೆತ್ತು ಸಲಹುವ ಶಕ್ತಿ ನಿನ್ನಲ್ಲಿ ತುಂಬಲಿ. ದೈವಚಿಂತನೆಯಿರಲಿ. ದ್ವಿಪಾದರಿಗೂ ಚತುಷ್ಪಾದರಿಗೂ ಕಲ್ಯಾಣವಾಗುವಂತೆ ಬಾಳು''.

ಈ ಉದಾತ್ತಚಿಂತನೆಯೊಂದಿಗೆ ಮಂತ್ರವನ್ನು ಹೇಳುತ್ತಾ ದರ್ಭೆಯ ತುದಿಯಿಂದ ಆಕೆಯ ದೃಷ್ಟಿಯ ಮಧ್ಯೆ (ಭ್ರೂಮಧ್ಯೆ) ಸ್ಪರ್ಶಿಸಿ 'ಘೋರಚಕ್ಷುಸ್ಸು ನಿವೃತ್ತವಾಗಿದೆ' ಎಂದು ಭಾವಿಸುತ್ತಾ ಆ ದರ್ಭೆಯ ತುದಿಯನ್ನು ನೈರ್ಋತ್ಯದೆಡೆಗೆ ದೂರಕ್ಕೆ ಎಸೆಯುತ್ತಾನೆ. ನಿಃಸೃತವಾದ ಘೋರಚಕ್ಷುಸ್ಸೆಂಬ ದುಷ್ಟಶಕ್ತಿ ಮತ್ತೆ ಬರದಿರುವುದಕ್ಕಾಗಿ ಅದೇ ಸ್ಥಳದಲ್ಲಿ ಅಪತ್ನಿಘ್ನವೆನಿಸಿದ ಕುಂಕುಮದ ಊರ್ಧ್ವಪುಂಡ್ರವನ್ನು ಈಕೆ ಧರಿಸಬೇಕು ಎಂಬುದು ಹಿರಿಯರ ಅಂಬೋಣ.

ಈ ನಿರೀಕ್ಷಣಯಾದೊಡನೆ ಕನ್ಯಾದಾತೃ ಕನ್ಯಾದಾನದ ಸಂಕಲ್ಪವನ್ನು ಮಾಡಿ ಧಾರೆಯೆರೆದು ಕನ್ಯಾದಾನ ಮಾಡುತ್ತಾನೆ.

## ಮುಹೂರ್ತದಲ್ಲಿ ನಡೆಸಬೇಕಾದ ಕಾರ್ಯಯಾವುದು?

''ಪ್ರಾತಃ 10-20ಕ್ಕೆ ಸರಿಯಾಗಿ ಒದಗುವ ಕರ್ಕಾಟಕಲಗ್ನ ಸುಮುಹೂರ್ತದಲ್ಲಿ'' ಎಂದು ಆಹ್ವಾನಪತ್ರಿಕೆಯಲ್ಲಿ ಮುದ್ರಿತವಾಗಿರುತ್ತದೆ. 10.20ಕ್ಕೆ ಆರಂಭವಾಗಿ ಆನಂತರ ಅತಿಕಡಿಮೆಯೆಂದರೆ 13 ಅಥವಾ 26ನಿಮಿಷಗಳ ಕಾಲ ಶುಭಮುಹೂರ್ತವಿದೆಯೆಂದರ್ಥ. ಈ ಶುಭಮುಹೂರ್ತದಲ್ಲಿ ನಡೆಸಬೇಕಾದ ವಿವಾಹದ ಅಂಗಕಾರ್ಯ ಯಾವುದು? ನಿರೀಕ್ಷಣೆಯೋ? ಕನ್ಯಾದಾನವೋ? ಮಾಂಗಲ್ಯಧಾರಣವೋ? ಸಪ್ತಪದಿಯೋ? ಪಾಣಿಗ್ರಹಣವೋ?

**'ಗ್ರಾಹ್ಯಃ ಪ್ರಧಾನಾನುಗುಣೋ ಮುಹೂರ್ತಃ'** ಎಂಬ ಮಾತಿದೆ. ಪ್ರಧಾನಕಾರ್ಯಕ್ಕೆ ಅನುಗುಣವಾಗಿ ಉಳಿದ ಕೆಲಸಗಳನ್ನು ಮುಗಿಸಿಕೊಂಡು ಮುಹೂರ್ತದಲ್ಲಿ ಪ್ರಧಾನ ಕಾರ್ಯವನ್ನು ನಡೆಸಬೇಕು. ವಿವಾಹದ ಪ್ರಧಾನಕಾರ್ಯ ಯಾವುದು?

''ಪಾಣಿಗ್ರಹಣವೇ ಪ್ರಧಾನ'' ಎಂದವರು ಕೆಲವರು. ವೇದಗಳಲ್ಲಿ ಪುರಾಣಗಳಲ್ಲಿ ಪಾಣಿಗ್ರಹಣವನ್ನೇ ಪ್ರಧಾನವಾಗಿ ಉಲ್ಲೇಖಿಸಿದೆ. 'ಸುಮುಹೂರ್ತೇ ಪಾಣಿಂ ಗೃಹ್ಣೀಯಾತ್' ಎಂದಿದೆ.

''ಮಾಂಗಲ್ಯಧಾರಣೆ, ತಾಳಿಕಟ್ಟುವುದೇ ಸರ್ವಪ್ರಧಾನ'' ಎಂಬುವರೂ ಕೆಲವರು. ಆದಕ್ಕಲ್ಲವೇ ಗಟ್ಟಿಮೇಳ. ಬಿಚ್ಚಲಾಗದ ದಾಂಪತ್ಯದ ಬಿಗಿಬಂಧನ ಅಲ್ಲಿ ಅಲ್ಲವೇ ಉಂಟಾಗುವುದು.

''ಸಪ್ತಪದಿ ತುಳಿದಾಗ ಹುಡುಗಿಯ ಗೋತ್ರ ಬದಲಾಗುತ್ತದೆ - **ಸ್ವಗೋತ್ರಾತ್ ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ.** ಹೀಗೆ ಜನ್ಮದಿಂದ ಬಂದ ಗೋತ್ರವನ್ನು ಬದಲಾಯಿಸುವ ಸಾಮರ್ಥ್ಯ ಮಂತ್ರಪೂರ್ವಕ ಸಪ್ತಪದಿಗೆ ಮಾತ್ರ. ಆದ್ದರಿಂದ ಸಪ್ತಪದಿ ತುಳಿಯುವುದೇ ಪ್ರಧಾನ'' ಎಂಬುದೂ ಒಂದಿಬ್ಬರ ವಾದ.

''ವಿವಾಹವೆಂಬುದು ಕನ್ಯೆಗೆ ಉಪನಯನಕ್ಕೆ ಸದೃಶವಾದ ಮುಖ್ಯಸಂಸ್ಕಾರ. ಆಕೆಯನ್ನು ವಿಧ್ಯುಕ್ತವಾಗಿ ದಾನವಿತ್ತಾಗ ಅವಳು ಸಂಸ್ಕೃತಳಾಗುತ್ತಾಳೆ. ಹಾಗಾಗಿ ಕನ್ಯಾದಾನವೇ ಮುಖ್ಯ. ಆದಕ್ಕೆ ಮುಹೂರ್ತ''. ಹೀಗೂ ವಾದವಿದೆ.

ಉತ್ತರವೇನು?

ಎಲ್ಲಾ ವಾದವೂ ಸರಿಯೇ. ಅವೆಲ್ಲವೂ ಪ್ರಧಾನ. ಅದರೊಂದಿಗೆ ಲಾಜ-ಹೋಮವೂ, ಪರಿಣಯನವೂ, ಮಾಲಿಕಾರೋಪಣವೂ.

ಆದರೆ ಮುಹೂರ್ತದ ಅಲ್ಪಕಾಲದಲ್ಲಿ ನಡೆಸಬೇಕಾದುದೇನು?

ನಿರೀಕ್ಷಣೆ. ವಧೂವರರು ಪರಸ್ಪರ ನಿರೀಕ್ಷಿಸಿಕೊಳ್ಳುವ ಈ ಕಾಲಕ್ಕೇ ಮುಹೂರ್ತ. ಈ ಹೊತ್ತಿಗೇ ಮಾಲಿಕಾರೋಪಣ. 'ಮಾಲೆ ಹಾಕುವ ಮುಹೂರ್ತ' ಅಂತ ಜನ ಆಡಿಕೊಳ್ಳುವುದು ಇದನ್ನೇ.

ಉಪನಯನದಲ್ಲೂ ಮುಹೂರ್ತ ನೋಡುವುದು ನಿರೀಕ್ಷಣೆಗೇ. ಈ ಹಿಂದೆ ವಟು ತಂದೆಯನ್ನು ಅದೆಷ್ಟು ಬಾರಿ ನೋಡಿದ್ದರೂ ಇಂದು ಈತ ಗುರು, ಈತ ಶಿಷ್ಯ ಎಂಬ ಭಾವದಿಂದ ಇವರಿಬ್ಬರು ನೋಡಿಕೊಳ್ಳುತ್ತಾರೆ. ಆ ಕಾಲದಲ್ಲಿ ಗ್ರಹಸ್ಥಿತಿ ಸರಿಯಿರಬೇಕು. ಹಾಗೆಯೇ ವಧೂವರರು ಈ ಹಿಂದೆ ಹಲವು ಬಾರಿ ನೋಡಿ ಮಾತನಾಡಿರಬಹುದು. ಆದರೆ ಅಲ್ಲಿ ಈಕೆ ನನ್ನ ಪ್ರೇಯಸಿ, ಈತ ನನ್ನ ಪ್ರಿಯ, ಮದುವೆಯಾಗಲಿರುವವ ಎಂಬ ಭಾವವಿದ್ದಿತೇ ಹೊರತು ಪತಿಪತ್ನಿಭಾವದ ಉತ್ಕರ್ಷ ಹೊಳಪು ಇರಲಿಲ್ಲ. ಮಂತ್ರ-ಘೋಷಗಳ ಮಧ್ಯೆ ಇವರೀರರ್ವರಲ್ಲಿ ಇವನು ನನ್ನ ಪತಿ, ಈಕೆ ಪತ್ನಿ ಎಂಬ ಭಾವದೊಂದಿಗೆ ಇದೇ ಮೊದಲ ನಿರೀಕ್ಷಣೆ ನಡೆಯುತ್ತದೆ. ಈ ಕಾಲದಲ್ಲಿ ಶುಭಯೋಗ-ವಿದ್ದಾಗ ಮುಂದಿನ ಪತಿಪತ್ನಿಭಾವ ದೃಢವಾಗಿ ಸಮೃದ್ಧವೈವಾಹಿಕಜೀವನಕ್ಕೆ ನಾಂದಿ-ಯಾಗುತ್ತದೆ. ದುರ್ಮುಹೂರ್ತದ ವಿವಾಹ ಹಲವು ವಿಪರ್ಯಾಸಗಳ ಬೀಜವಪನ.

ಒಂದು ಕಾಲದಲ್ಲಿ ಅಂತಃಪಟ ತೆರೆದು ನಿರೀಕ್ಷಣೆಯ ತನಕ ವರ ವಧುವಿನ ಮುಖವನ್ನೇ ನೋಡುತ್ತಿರಲಿಲ್ಲ. ವಧೂವರರ ಪರಸ್ಪರ ಮೊದಲ ಅವಲೋಕನವೇ

ನಿರೀಕ್ಷಣೆ ಎನ್ನುವವರಿದ್ದಾರೆ. ನಾನು ಹಾಗೆ ಆಲೋಚಿಸುವುದಿಲ್ಲ. ಶಾಸ್ತ್ರದಲ್ಲೂ ಇದು ಅಭಿಪ್ರೇತವಲ್ಲ ಎಂದು ತರ್ಕಿಸುತ್ತೇನೆ. ವಧೂವರರ ಪರಸ್ಪರ ದರ್ಶನ ಮೊದಲಾಗ-ದಿದ್ದರೆ 'ಮನೋಘಟನೆ' ಎಂಬ ಮಾತಿಗೆ ಅರ್ಥವಿಲ್ಲ. ವಧೂವರರ ಸಂಬಂಧಿಗಳ ಮನಸ್ಸು ಒಪ್ಪಿದರೆ ಮನೋಘಟನೆಯಾದೀತೇ? '**ಯತ್ರ ವರಸ್ಯ ಮನೋ ರಮತೇ ತದ್ರೂಪಂ ರೂಪಸಂಪನ್ನಾಮರೋಗಾಮುಪಯಚ್ಛೇತ**' ಎಂಬ ಗೃಹ್ಯಸೂತ್ರದ ಗತಿಯೇನು? 'ಯಾರಲ್ಲಿ ಮನಸ್ಸು ಕಣ್ಣುಗಳು ನೆಟ್ಟು ಬಿಡುತ್ತವೋ ಅಂತಹ ಅಸಗೋತ್ರ ಸವರ್ಣೆಯಲ್ಲಿ ವೃದ್ಧಿ' ಎಂಬ ಆಪಸ್ತಂಬರ ಮಾತು ಕೇಳಿಲ್ಲವೇ?

ಆದ್ದರಿಂದ ವಧೂವರರು ಮೊದಲೇ ಪರಸ್ಪರ ನೋಡಿ (ಬೇಕಾದರೆ ಮಾತನಾಡಿ) ಒಪ್ಪಿರಬೇಕು. ವಿವಾಹದ ದಿನ ಪತಿಪತ್ನಿಭಾವದಿಂದ ಮೊದಲ ನಿರೀಕ್ಷಣೆಯಾದ್ದರಿಂದ ಅದಕ್ಕೆ ಮಹತ್ವವಿದೆ. ಶುಭಮುಹೂರ್ತದ ಆರಂಭದಲ್ಲಿ ನಿರೀಕ್ಷಣೆ ನಡೆದು ಕನ್ಯಾ-ದಾನವೂ ಆ ಮುಹೂರ್ತದಲ್ಲೇ ನಡೆಯುತ್ತದೆ. ಮುಂದಿನ ಮಾಂಗಲ್ಯಧಾರಣಾದಿಗಳಿಗೆ ವಿಪ್ರರ '**ಸುಮುಹೂರ್ತೋಽಸ್ತು**'ಎಂಬ ಮಾತೇ ಸಾಕು. 'ವಿಪ್ರವಾಕ್ಯೋ ಜನಾರ್ದನಃ' ಎಂಬ ಚಿಂತನೆ ಬೇಕು. ವಿಪ್ರರ ಮಾತೇ ಜನಾರ್ದನನ ಮಾತು. ಎಲ್ಲಕ್ಕಿಂತಲೂ ಲಕ್ಷ್ಮೀಪತಿಯ ಅಂಘ್ರಿಯುಗಲದ ಸ್ಮರಣೆಯಿದ್ದರೆ ಆ ಕಾಲವೇ ಲಗ್ನ. ಆ ದಿನವೇ ಸುದಿನ. '**ತದೇವ ಲಗ್ನಂ ಸುದಿನಂ ತದೇವ**'.

ಇನ್ನೊಂದು ಅಂಶವನ್ನು ಗಮನಿಸಬೇಕು. ಶುಭಮುಹೂರ್ತದಲ್ಲಿ ವಿವಾಹವನ್ನು ಆದೇಶಿಸಿದ ಗೃಹ್ಯಸೂತ್ರಗಳಾಗಲೀ ಕಾರಿಕೆಗಳಾಗಲೀ ಮಾಂಗಲ್ಯಧಾರಣೆಯ ಬಗ್ಗೆ ಉಲ್ಲೇಖಿಸಿಲ್ಲ. ಇಂದಿನ ಚಲನಚಿತ್ರ, ನಾಟಕ ಮುಂತಾದ ಮಾಧ್ಯಮಗಳ ಅತಿ-ರಂಜನೆಯ ಮೂಲಕ ಅಸಾಧಾರಣಮಹತ್ವವನ್ನು ಪಡೆದ ತಾಳಿಕಟ್ಟುವ ಪ್ರಕ್ರಿಯೆ ಮೂಲಪೌರೋಹಿತ್ಯ ಗ್ರಂಥಗಳಲ್ಲಿ ಇಲ್ಲವೇ ಇಲ್ಲ. ಭವಿಷ್ಯೋತ್ತರಪುರಾಣದ ಶ್ರೀನಿವಾಸಮಾಹಾತ್ಮ್ಯೆಯಲ್ಲಿ ಮಾತ್ರ '**ಮಾಂಗಲ್ಯಂ ತಂತುನಾನೇನ...**' ಎಂಬ ಶ್ಲೋಕ ಉಪಲಬ್ಧವಿದೆ. ಈ ಅಂಶ ಸಂಪ್ರದಾಯದಲ್ಲಿ ಸೇರಿ ಬಂದಿದೆ. ತಾಳಿಕಟ್ಟಿದಾಗಲೇ ವಿವಾಹಪೂರ್ತಿಯಾಗುವುದು ಎಂಬ ಶುಭಸಂಪ್ರದಾಯ ಲೋಕವಿತತವಾಗಿದೆ. ಹಿಂದೂಧರ್ಮದ ದಾಂಪತ್ಯಧರ್ಮದ ಭದ್ರತೆಯ ಕುರುಹಾಗಿದೆ.

## ಕನ್ಯಾದಾನ

ಕನ್ಯಾದಾತೃ ಪತ್ನಿಯೊಡನೆ ಕೂಡಿ ಮಹಾಸಂಕಲ್ಪ ಮಾಡುತ್ತಾನೆ. ಈ ಮಹಾಸಂಕಲ್ಪವನ್ನು ಅರ್ಥೈಸಿಕೊಳ್ಳಬೇಕಾದರೆ ಸಮಗ್ರ ಬ್ರಹ್ಮಾಂಡದ ಪರಿಚಯ ಬೇಕು.

ದೇಶ ಹಾಗೂ ಕಾಲಗಳಿಗೆ ಸಂಬಂಧಿಸಿದ ಎಲ್ಲ ಅವಾಂತರವಿಶೇಷಗಳೂ ಈ ಸಂಕಲ್ಪದಲ್ಲಿ ಅಡಕವಾಗಿವೆ. ದೇಶಕಾಲಗಳಲ್ಲಿ ವ್ಯಾಪ್ತನಾದ ದೇಶಾತೀತ ಕಾಲಾತೀತ ಪರಶಕ್ತಿಯ ಮಹತಿಯನ್ನು ಅನುಸಂಧಾನಿಸಲು ಈ ಸಂಕಲ್ಪ ಉತ್ತಮ ಮಾಧ್ಯಮ.

ಕನ್ಯಾದಾನ ಮಹಾದಾನ. ಇದಕ್ಕೆ ತ್ರಿಗುಣೀಕೃತ ಅಗ್ನಿಷ್ಟೋಮದ ಫಲ. ಮೂರು ಪಟ್ಟು ದಕ್ಷಿಣೆ ಹಾಗೂ ವೈಭವದಿಂದೊಡಗೂಡಿದ ವಾಜಪೇಯದ ಫಲ. ದೇಹಾ-ವಸಾನದಲ್ಲಿ ಶಾಶ್ವತ ಬ್ರಹ್ಮಲೋಕವು ಫಲ. ಉಭಯಕುಲಪಿತೃಪ್ರೀತಿಯೂ ಫಲ. ಉಚ್ಚರಿಸಿ ನಿರೂಪಿಸಲು ಸಾಧ್ಯವಾಗದಷ್ಟು ದೊಡ್ಡ ಫಲ ಇದಕ್ಕಿದೆ. ಈ ಎಲ್ಲಾ ಕನ್ಯಾದಾನಕಲ್ಪೋಕ್ತಫಲಪ್ರಾಪ್ತಿಗಾಗಿ ಬ್ರಾಹ್ಮವಿವಾಹವಿಧಿಯಿಂದ ಯಥಾಶಕ್ತ್ಯಲಂಕೃತಳಾದ ಈ ಕನ್ಯೆಯನ್ನು ಶ್ರೀಧರರೂಪಿ ವರನಿಗೆ ದಾನವೀಯುತ್ತೇನೆ ಎಂದು ತಂದೆ ಸಂಕಲ್ಪಿಸುತ್ತಾನೆ. ತಾಯಿ ಸಮ್ಮತಿಯನ್ನು ಸೂಚಿಸುತ್ತಾ ಸಹಧರ್ಮಿಣಿಯಾಗಿ ನೀರು ಸುರಿಯುತ್ತಾಳೆ.

ತಂದೆ ಕನ್ಯೆಯ ಕೈಯ್ಯಲ್ಲಿ ಬಂಗಾರವನ್ನಿಟ್ಟು ಆಕೆಯನ್ನು ಭುಜದಲ್ಲಿ ಹಿಡಿದು 'ಬ್ರಾಹ್ಮೇಣ ವಿವಾಹೇನ ಇಮಾಂ ಕನ್ಯಾಂ ಪ್ರದಾಸ್ಯಾಮಿ' ಇದಕ್ಕೆ ಸರ್ವದೇವತೆಗಳು ಸಾಕ್ಷಿ. ಸಾಕ್ಷಾದ್ ವಿಶ್ವಂಭರನೇ ಸಾಕ್ಷಿ ಎನ್ನುತ್ತಾನೆ.

ಬಂಗಾರವುಳ್ಳ ಕನ್ಯೆಯ ಬೊಗಸೆಯ ಮೇಲೆ ವರನ ಅಂಜಲಿಯನ್ನಿಟ್ಟು ವರನ ಕೈಯ್ಯಲ್ಲಿ ಫಲದಕ್ಷಿಣೆಗಳನ್ನಿಟ್ಟು ತನ್ನ ಪತ್ನಿ ಗಿಂಡಿಯಿಂದ ಸುರಿದ ಜಲಧಾರೆಯ ಮೂಲಕ ದಾನವೀಯುತ್ತಾನೆ.

## ಗಂಡು ಮೇಲೆ; ಹೆಣ್ಣು ಕೆಳಗೆ

'ಜಗಳವಿಲ್ಲದಿದ್ದರೆ ಮದುವೆಯೇ ಅಲ್ಲ' ಎಂಬಷ್ಟೂ ಸಾಮಾನ್ಯವಾದದ್ದು ವಿವಾಹ-ದಲ್ಲಿ ಜಗಳ. ಇದು ಪ್ರೀತಿಯ ಗಲಾಟೆ. ಅದರಲ್ಲೊಂದು ವಿವಾದ ಇದು. ಕನ್ಯಾದಾನ ಕೊಡುವಾಗ ವರನ ಕೈ ಮೇಲೋ? ವಧುವಿನ ಕೈ ಮೇಲೋ? ಈ ಬಗ್ಗೆ ಕೈ ಮೇಲಾ-ದದ್ದಿದೆ.

ನಾವು ಗಂಡಿನ ಕಡೆಯವರು. ಗಂಡು ಎಂದಿದ್ದರೂ ಮೇಲೆಯೇ. ವರನ ಕೈ ಕೆಳಗಿಡುವುದೆಂದರೇನು? ಸಾಧ್ಯವಿಲ್ಲ; ವರನ ಕೈ ಮೇಲಿರಬೇಕು.

ಅಲ್ಲ ಸ್ವಾಮಿ ಸ್ವಲ್ಪ ಯೋಚಿಸಿ; ವಧುವನ್ನು ವರನಿಗೆ ದಾನವೀಯುವುದಲ್ಲವೇ? ದೇಯವಸ್ತು ಮೇಲಿರಬೇಕು. ಪ್ರತಿಗ್ರಹೀತೃವಿನ ಕೈ ಕೆಳಗೆ. ತೆಗೆದುಕೊಳ್ಳುವವ

ಚಿಕ್ಕವನಾಗಲೇ ಬೇಕು. ಬಲಿಯ ಮುಂದೆ ದೇವನೂ ವಾಮನನಾಗಲಿಲ್ಲವೇ? ವರಾಂಜಲಿಯನ್ನು ಮೇಲಿಟ್ಟು ಕನ್ಯಾಪಿತೃ ನೀರು ಹಾಕಿದರೆ ಅಸಂಬಂದ್ಧವಲ್ಲವೇ? ವರನನ್ನು ಕನ್ಯೆಗೆ ದಾನಕೊಡುವುದೇನು? ಅಬದ್ಧ!!

ಈ ರೀತಿಯ ತರ್ಕಗಳಿಗೆ ಕೊನೆಯಿಲ್ಲ. **ಕನ್ಯೆಯ ಬೊಗಸೆ ಕೈಯ ಮೇಲೆ ವರನ ಕೈಯ್ಯನ್ನು ಇಡಬೇಕು** ಎಂಬುದೇ ಸರಿಯಾದ ವಿಧಿ.

ದಾನದ ಕ್ರಮವನ್ನು ನಿರೂಪಿಸುವ ಸ್ಮೃತಿ ಭೂ, ಶಯ್ಯಾ ಮೊದಲಾದ ದಾನಗಳ ವಿಧಿ ನಿರೂಪಿಸಿ, 'ಅನ್ಯಾನಿ ದಾನಾನಿ ಚ ಹಸ್ತಮಧ್ಯೇ' ಎಂದಿದೆ. ಉಳಿದ ದಾನಗಳು ಹಸ್ತಮಧ್ಯದಲ್ಲಿ ನೀಡತಕ್ಕವುಗಳು. ಆದರೆ ಗೋ ಭೂ-ಶಯ್ಯಾದಾನಾದಿಗಳು ಹಾಗಲ್ಲ. ಭೂಮಿಯನ್ನು ಎತ್ತಿ ಅವನ ಕೈಯ್ಯಲ್ಲಿ ಇಡುವುದು ಶಕ್ಯವೇ?

ಭೂಮಿಯಲ್ಲಿ ವಿಪ್ರನನ್ನು ಕುಳ್ಳಿರಿಸಿ ಪೂಜಿಸಿ ದಾನವೀಯಬೇಕು. ಶಯ್ಯೆಯಲ್ಲೂ ಹಾಗೇ. ಇಲ್ಲಿ ದೇಯವಾದ ಭೂಮಿ ಶಯ್ಯೆಗಳು ಕೆಳಗೆ, ಪ್ರತಿಗ್ರಹೀತೃ ವಿಪ್ರನು ಮೇಲೆ. ಭೂದಾನ, ಶಯ್ಯಾದಾನದಂತೆಯೇ ಕನ್ಯಾದಾನ. ಕನ್ಯೆ ಭೂಮಿಯಂತೆ ಧಾರಕಳು. ಶಯ್ಯೆಯಂತೆ ವಿಶ್ರಾಂತಿ ನೆಮ್ಮದಿ ನೀಡುವವಳು. ಈಕೆಯ ದಾನದಲ್ಲೂ ಇವಳು ಕೆಳಗೆ ಸ್ವೀಕರ್ತೃ ಮೇಲೆ. ಹಾಗಾಗಿಯೇ ಪ್ರಯೋಗಗಳಲ್ಲಿ ಈ ಮಾತಿದೆ - **'ಕನ್ಯಾಂಜಲ್ಯುಪರಿ ವರಾಂಜಲಿಂ ನಿಧಾಯ'.**

## ಧರ್ಮೇ ಚಾರ್ಥೇ ಚ ಕಾಮೇ ಚ

ಈಗ ಕನ್ಯಾದಾತೃ ವರನಿಗೆ ಶ್ವಶುರ(ಮಾವ)ನಾಗಿದ್ದಾನೆ. **'ಶು ಆಶು ಅಶ್ನುತೇ ಇತಿ ಶ್ವಶುರಃ'** ಶು ಎಂಬುದು ಪೂಜಾರ್ಥದಲ್ಲಿ ಅವ್ಯಯ. 'ಮೊದಲ ಪೂಜೆಗೆ ಯೋಗ್ಯ' ಎಂಬುದು ಶ್ವಶುರ ಶಬ್ದದ ಅರ್ಥ. ವಧುವಿಗೆ ಗಂಡನ ತಂದೆಯೂ ಶ್ವಶುರನಾಗಿ ಬಿಟ್ಟ.

ಶ್ವಶುರನಾದ್ದರಿಂದಲೇ ಈತ ವರನಿಗೆ ಎರಡು ಉಪದೇಶದ ಮಾತು ಹೇಳುತ್ತಾನೆ.

> 'ವತ್ಸ! ನಿನಗೆ ತಿಳಿದೇ ಇರುವಂತೆ ನಾವು ಗೃಹಸ್ಥರಾಗಿ ಅಭಿಲಷಿಸಿ ಸಂಪಾದಿಸಬೇಕಾದುದು ಧರ್ಮ, ಅರ್ಥ, ಕಾಮಗಳನ್ನು. ನಾಲ್ಕು ಜನ-ರಿಗೆ ಅನ್ನಹಾಕಿ ಅತಿಥಿಪೂಜೆ ಯಜ್ಞಾದಿಗಳನ್ನು ನಡೆಸಿ ಧರ್ಮ(ಪುಣ್ಯ) ಸಂಪಾದನೆ ಮಾಡಬೇಕು. ಆದಕ್ಕಾಗಿ ಧನಧಾನ್ಯಗಳ ಸಂಪಾದನೆ ಅತ್ಯವಶ್ಯ. ಇದೇ ಅರ್ಥ. ಸಂಪಾದಿಸಿದ ಅರ್ಥದಿಂದ ಧರ್ಮವನ್ನಲ್ಲದೆ ಅನಾಯಾಸಸಂಪ್ರಾಪ್ತವಾದ ಕಾಮೋಪಭೋಗಗಳನ್ನೂ ಸ್ವೀಕರಿಸಿ ಖುಷಿ

ಪಡಬೇಕು. **'ಅನಿಷಿದ್ಧಸುಖತ್ಯಾಗೀ ಪಶುರೇವ ನ ಸಂಶಯಃ'** - ಶಾಸ್ತ್ರನಿಷೇಧವಿಲ್ಲದ ಸುಖವನ್ನು ತ್ಯಜಿಸುವ ಗೃಹಸ್ಥ ಪಶುತುಲ್ಯ. ತಾನು ಸುಖಿಯಾಗಿ ಇತರರನ್ನು ಸುಖದಿಂದಿರಿಸುವುದೇ ಗೃಹಸ್ಥಧರ್ಮ. ಈ ರೀತಿಯ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗದ ಸಾಧನೆಯಿಂದ ಅಪವರ್ಗದ ಮಾರ್ಗ ತಾನಾಗಿ ತೆರೆಯುತ್ತದೆ.

ಈ ಅಪವರ್ಗದ ಬಗ್ಗೆ ನನ್ನ ಮಾತಿಲ್ಲ. ಆದರೆ ಧರ್ಮ, ಅರ್ಥ, ಕಾಮಗಳಲ್ಲಿ ಈ ನನ್ನ ಮಗಳನ್ನು ಉಪಯೋಗಿಸಿಕೋ. ನಿನ್ನ ಧರ್ಮಾರ್ಥಕಾಮಗಳಲ್ಲಿ ಈಕೆ ಸಮಪಾಲು ಪಡೆದ ಸಹಧರ್ಮಿಣಿ-ಯಾಗಲಿ. ಸುಖದಲ್ಲೂ ದುಃಖದಲ್ಲೂ ಜೊತೆಯಾಗಿ ನಡೆಯಿರಿ. ಎಂದೆಂದಿಗೂ **ಧರ್ಮೇ ಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಮ್''.**

'ಧರ್ಮ ಅರ್ಥ ಕಾಮಗಳಲ್ಲಿ ಎಂದಿಗೂ ಈಕೆಯನ್ನು ಮೀರಿ ನಡೆಯುವುದಿಲ್ಲ. ಜೊತೆಗೆ ಬಾಳಿ ಬದುಕುತ್ತೇವೆ' ಎಂದು ಈ ತರುಣ ದೇವದ್ವಿಜರ ಸನ್ನಿಧಿಯಲ್ಲಿ ಪ್ರತಿಜ್ಞೆಗೈಯ್ಯುತ್ತಾನೆ. ಸನ್ನಿಹಿತ ಅತೀಂದ್ರಿಯಶಕ್ತಿಗಳು 'ತಥಾಸ್ತು' ಎನ್ನುತ್ತವೆ.

ಸಂಸ್ಕೃತಬಾರದ ಇಂದಿನ ಬ್ರಾಹ್ಮಣಜಾತಿಯ ಅನೇಕ ವರಶ್ರೇಷ್ಠರ ಬಾಯಲ್ಲಿ 'ಧರ್ಮೇ ಚಾರ್ಥೇ ಚ ಕಾಮೇಚ ನಾತಿಚರಾಮಿ' ಎಂಬ ಮಾತು ಹೊರಡುವುದಿಲ್ಲ. ನಾಲಿಗೆ ಹೊರಳಿದರೂ ಅವರ ದೃಷ್ಟಿ ಈ ಮಾತು ಆಚರಣೆಗಳ ಬಗೆಗೆ ಇರುವುದಿಲ್ಲ. ಹಾಗಾಗಿ ಪುರೋಹಿತರೇ 'ಈ ಕನ್ಯೆಯೊಡನೆ ಧರ್ಮಾರ್ಥಕಾಮಗಳಲ್ಲಿ ಮೀರಿ ನಡೆಯುವುದಿಲ್ಲ' ಎಂದು ಬಿಡುತ್ತಾರೆ. ಅಬ್ಬಾ!! ಅದಕ್ಕಾಗಿಯೇ ಈ ವರ ಆ ಮಾತಿನ ಅರ್ಥವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ಗೋಜಿಗೇ ಹೋಗುವುದಿಲ್ಲ. ಹೀಗಾಗಬಾರದು. ಭಾರತಮಾತೆಯ ಒಡಲಿನಲ್ಲಿ ಹುಟ್ಟಿದವ ಅಲ್ಪವಾದರೂ ಸಂಸ್ಕೃತ-ವೆಂಬ ಮಾತೃಭಾಷೆಯನ್ನು ಅರಿತಿರಬೇಕು. ನಾವು ಇಂಡಿಯಾದ ಮಕ್ಕಳಲ್ಲ. ಭಾರತ ಎಂಬ ಅಚ್ಚಸಂಸ್ಕೃತತಾಯಿಯ ಮಕ್ಕಳು.

## ವರದಕ್ಷಿಣೆ

ಕನ್ಯಾದಾನವನ್ನು ಮಾಡಿದ ಮಾವ ಕನ್ಯೆಯ ಕೈಲಿದ್ದ ಹಿರಣ್ಯದಕ್ಷಿಣೆಯನ್ನು ತುಳಸಿಯನ್ನು ಹಿಡಿದುಕೊಂಡು 'ಕನ್ಯಾದಾನ ಸಂಪೂರ್ಣತೆಗಾಗಿ ಈ ದಕ್ಷಿಣೆಯನ್ನು ನೀಡುತ್ತಿದ್ದೇನೆ' ಎನ್ನುತ್ತಾನೆ. ಈ ದಕ್ಷಿಣೆಗೇ **ವರದಕ್ಷಿಣೆ** ಎಂದು ಹೆಸರು.

ದಾನದ ಸಾಂಗತೆಗೆ ಐದು ಅಂಗಗಳು. ಮೊದಲು ತಾಂಬೂಲ, ನಂತರ ದೇಯವಸ್ತು, ನಂತರ ದಕ್ಷಿಣೆ, ತುಳಸಿ, ನೀರುಗಳು. ಈ ಐದರೊಂದಿಗೆ ಶ್ರದ್ಧೆ ಹಾಗೂ ಉಪಚಾರದ ಮಾತೂ ಸೇರಿದಾಗ ದಾನ ಬೃಂಹಿತವಾಗುತ್ತದೆ. ಹಾಗಾಗಿ ದಕ್ಷಿಣೆಯು ದಾನದ ಅವಿಭಾಜ್ಯ ಅಂಗ. ಅಂತೆಯೇ ಕನ್ಯಾದಾನದಲ್ಲಿ ವರದಕ್ಷಿಣೆ.

'ದಾನದ ಜೊತೆಗಿನ ದಕ್ಷಿಣೆ ಇಂತಿಷ್ಟೇ ಇರಬೇಕು' ಎಂಬ ನಿಯಮವಿಲ್ಲ. ಅದು ದಾತೃವಿನ ಶಕ್ತಿ, ಶ್ರದ್ಧೆಗೆ ಬಿಟ್ಟದ್ದು. ಅದನ್ನು ಕೇಳುವ ಅಧಿಕಾರ ಪ್ರತಿಗ್ರಹೀತೃವಿಗೆ ಸುತರಾಂ ಇರುವುದಿಲ್ಲ. ಜನಕ ಸೀತೆಯನ್ನು ಕೊಟ್ಟಾಗ ದಶರಥ ಈ ಮಾತು ಹೇಳಿದ್ದ. ಸತ್ರಾಜಿತ ಸತ್ಯಭಾಮೆಯೊಡನೆ ಅನರ್ಘ್ಯ ಸ್ಯಮಂತಕಮಣಿಯನ್ನಿತ್ತಾಗ ಕೃಷ್ಣನೂ ಅದನ್ನೇ ಹೇಳಿದ 'ನನಗೆ ಈ ಸತ್ಯಭಾಮೆ ಸಾಕು, ಮಣಿ ನಿನಗೇ ಇರಲಿ'.

ಇಂದಿನ ವರದಕ್ಷಿಣೆಯ ಪಿಡುಗು ಜನರ ವಿಕೃತಿಯಿಂದ ಉಂಟಾದುದು. ಶಾಸ್ತ್ರಗಳಲ್ಲಿ ಅದಕ್ಕೆ ಅವಕಾಶ ಕೊಟ್ಟಿಲ್ಲ. ಒಂದು ಹೆಣ್ಣನ್ನು ತನ್ನ ಸ್ವಂತಿಕೆಯ ಸಂಪಾದನೆಯಿಂದ ಸಾಕಲಾಗದವನೂ ಒಬ್ಬ ಪುರುಷನೇ? ಇಂಥವನು ಮದುವೆ ಆಗಬೇಕು ಯಾಕೆ? '**ಉತ್ತಮಾ ಆತ್ಮನಾ ಖ್ಯಾತಾಃ**' ಎಂದು ಆರಂಭವಾದ ಶ್ಲೋಕ ಮುಗಿಯುವುದು '**ಸ್ತ್ರೀಖ್ಯಾತಾಃ ಅಧಮಾಧಮಾಃ**' ಎಂದು. ಹೆಣ್ಣು ತಂದ ಹಣದ ವಿಷಯ ಹಾಗಿರಲಿ. ಆಕೆಗೆ ತಂದೆಯ ಮನೆಯಲ್ಲಿ ಹಾಕಿದ್ದ ಆಭರಣಗಳ ಮೇಲೂ ಈ ಪತಿಭೂಪತಿಗೆ ಅಧಿಕಾರವಿಲ್ಲ. ಅದನ್ನೂ ಆಕೆಯಲ್ಲೇ ಪರಿರಕ್ಷಿಸುವ ಭಾರ ಈತನದು.

## ವಧುಪಕ್ಷದ ಸಂಪ್ರದಾಯದಲ್ಲಿ ಮದುವೆ

ಕನ್ಯಾದಾನವಾಗಿದೆ. ಇಲ್ಲಿಗೆ ವಧೂಪಕ್ಷದ ಜವಾಬ್ದಾರಿ ಮುಗಿದಿದೆ. ಮುಂದಿನ ಲಾಜಹೋಮಾದಿಕ್ರಮಗಳು ವರಪಕ್ಷದ ಪುರೋಹಿತರ ಮುಂದಾಳುತ್ವದಲ್ಲಿ ನಡೆಯುತ್ತದೆ.

ಕೆಲವೊಮ್ಮೆ ಗಂಡಿನ ಕಡೆಯವರ ಸಂಪ್ರದಾಯ ಹೆಣ್ಣಿನ ಕಡೆಯವರ ಸಂಪ್ರದಾಯಕ್ಕಿಂತ ತೀರಾ ಭಿನ್ನವಾಗಿರುತ್ತದೆ. ಸೀತಾರಾಮ ಉಡುಪರ ಮಗಳನ್ನು ಕೊಪ್ರೇಶಾಚಾರ್ಯ ಕುಲಕರ್ಣಿಯವರಿಗೆ ಕೊಡುವಾಗ ಈ ಸಮಸ್ಯೆ ಉದ್ಭವಿಸುತ್ತದೆ. ಈಗ ಯಾರ ಸಂಪ್ರದಾಯದ ಪ್ರಕಾರ ನಡೆಯಬೇಕು. ಉಡುಪರ ಕಡೆಯಿಂದ ಪುರೋಹಿತರಾಗಿ ಬಂದ ಪೆಜತ್ತಾಯರನ್ನು ಕುಲಕರ್ಣಿಯ ಪುರೋಹಿತರು ವರಪೂಜೆ ಸರಿಯಾಗಿ ಆಗಿಲ್ಲ. ಕಡಲೆ ಬೆಲ್ಲದ ಶಾಸ್ತ್ರ ಎಲ್ಲಿ? ಜೀರಿಗೆ ಬೆಲ್ಲ ಹಿಡಿಲಿಲ್ಲ?

ದೃಷ್ಟಿಪರಿಹಾರ ಯಾಕೆ ಮಾಡಿಲ್ಲ? ಎನ್ನುತ್ತ ಗೋಳಾಡಿಸಿ ಬಿಡುತ್ತಾರೆ. ಪೆಜತ್ತಾಯರ ಸ್ವರಬದ್ಧ ಮಂತ್ರಗಳೊಂದಿಗಿನ ಶಾಸ್ತ್ರೀಯಅನುಷ್ಠಾನ ಯಾರಿಗೂ ಬೇಕಿಲ್ಲ. ಆಗೀಗ ಹೌಹಾರುತ್ತಾ ಅವರಿವರನ್ನು ಬೈಯ್ಯುತ್ತಾ, ಗೌಜೆಬ್ಬಿಸುವುದರ ಜೊತೆಗೆ ಸಂಪ್ರದಾಯದ ವಿಧಿಗಳೇ ಜನಕ್ಕೆ ಮುಖ್ಯ.

'ನಮ್ಮ ಸಂಪ್ರದಾಯದ ಪ್ರಕಾರವೇ ಮದುವೆ ನಡೆಸಿಕೊಡಬೇಕು' ಎಂಬ ಪಟ್ಟು ಗಂಡಿನ ಕಡೆಯವರದು. 'ಮೀಸೆಯುಳ್ಳ ಗಂಡಿನ ಪಕ್ಷದವರು ನಾವು' ಎಂಬ ಹಮ್ಮು ಇವರದು. ವಸ್ತುಸ್ಥಿತಿ ಏನು?

ಪುಣ್ಯಾಹ-ವಾಗ್ದಾನದಿಂದ ಆರಂಭಿಸಿ ಕನ್ಯಾದಾನದ ತನಕದ ಎಲ್ಲ ವಿಧಿವಿಧಾನಗಳೂ ವಧೂಪಕ್ಷದ ಸಂಪ್ರದಾಯದ ಪ್ರಕಾರವೇ ನಡೆಯಬೇಕು. ಅದಕ್ಕೆ ವರಪಕ್ಷದವರು ಬದ್ಧರಾಗಬೇಕು. ಕನ್ಯಾದಾನವಾದ ಮೇಲೆ ಕನ್ಯಾಪಕ್ಷದ ಪುರೋಹಿತರು ಗಂಡಿನ ಕಡೆಯ ಪುರೋಹಿತರನ್ನು ಕುರಿತು ಕೈಮುಗಿದು ''ನಮ್ಮ ಭಾರವನ್ನು ನಿರ್ವಹಿಸಿದ್ದೇವೆ. ಇನ್ನು ಮುಂದಿನ ವಿಧಿ-ವಿಧಾನಗಳನ್ನು ತಮ್ಮ ಸಂಪ್ರದಾಯದಂತೆ ನಿರ್ವಹಿಸಬೇಕಾಗಿ ವಿನಂತಿಸುತ್ತೇವೆ'' ಎನ್ನುತ್ತಾರೆ. ಈ ಮುಂದೆ ವರಪಕ್ಷದ ಸಂಪ್ರದಾಯದಂತೆ ಲಾಜ-ಹೋಮಾದಿಗಳು ನಡೆಯುತ್ತವೆ.

## ಕಂಕಣಬಂಧ- ಅಕ್ಕಿಧಾರೆ

ಗೃಹ್ಯಸೂತ್ರಗಳು ತಿಳಿಸುವಂತೆ ಇಷ್ಟು ಕ್ರಮ — ಮೊದಲು ಗುಡ-ಜೀರಿಗೆ ಅಕ್ಷತೆಗಳನ್ನು ವಧೂವರರು ಪರಸ್ಪರ ಹಾಕಿಕೊಳ್ಳುತ್ತಾರೆ. ನಂತರ ಮಾಲಿಕಾರೋಪಣ. ಇನ್ನು ಕನ್ಯಾದಾನ. ಇದಾದಮೇಲೆ ಕೌತುಕಸೂತ್ರ (ಕಂಕಣ)ವನ್ನು ಸುತ್ತ ಸುತ್ತಿಕೊಂಡು ಪರಸ್ಪರ ಮಣಿಗಂಟಿಗೆ ಕಟ್ಟಿಕೊಳ್ಳುವುದು. ಇದಾದ ಮೇಲೆ ಅಕ್ಕಿಧಾರೆ.

ಒಂದು ಪಾತ್ರೆಯಲ್ಲಿ ಘೃತಮಿಶ್ರಿತ ಕ್ಷೀರವಿದೆ. ಇನ್ನೊಂದು ತೈಜಸಪಾತ್ರೆಯಲ್ಲಿ ಅಕ್ಷತ ತಂಡುಲ(ತುಂಡಾಗದ ಅಕ್ಕಿ)ವಿದೆ. ವರನು ಕೈ ಒದ್ದೆ ಮಾಡಿ ವಧೂಹಸ್ತಕ್ಕೆ ಎರಡು ಬಾರಿ ಹಾಲಿನಿಂದ ಅಭಿಘಾರ ಮಾಡುತ್ತಾನೆ. ಹಾಲಿನಿಂದ ಒದ್ದೆಯಾದ ಆಕೆಯ ಕೈಗೆ ಸಿತತಂಡುಲವನ್ನು ಎರಡು ಬಾರಿ ಹಾಕುತ್ತಾನೆ. ಮತ್ತೆ ಅಭಿಘಾರ ಮಾಡುತ್ತಾನೆ. ಅದೇ ರೀತಿ ಇನ್ನೋರ್ವ ವರನ ಹಸ್ತದಲ್ಲೂ ಅಕ್ಕಿ ತುಂಬುತ್ತಾನೆ. ಅಕ್ಕಿ ತುಂಬಿದ ಹೆಣ್ಣಿನ ಕೈಯ ಮೇಲೆ ಅಕ್ಕಿ ತುಂಬಿದ ತನ್ನ ಬೊಗಸೆಯನ್ನು ವರನಿಡುತ್ತಾನೆ. 'ಈ ಕನ್ಯೆ ದಾಟಿಸಿ ಬಿಡಲಿ. ಶಾಂತಿ ಪುಷ್ಟಿ ತುಷ್ಟಿಗಳು ನೆಲೆಗೊಳ್ಳಲಿ' ಎನ್ನುತ್ತಾನೆ. ಕನ್ಯೆ ತನ್ನ ಬೊಗಸೆಯಲ್ಲಿದ್ದ

ಅಕ್ಕಿಯನ್ನು 'ನನ್ನ ಕಾಮನೆಗಳು ಹಾಗೂ ಭಾಗ್ಯ ವೃದ್ಧಿಸಲಿ' ಎನ್ನುತ್ತಾ ವರಶಿರದಲ್ಲಿ ಧಾರೆಯೆರೆಯುತ್ತಾಳೆ. ವರಶಿರಸ್ಸು ಸಿಗದೇ ಹೋದಾಗ ಈ ಪುಟ್ಟ ಬಾಲೆಯನ್ನು ಕನ್ಯಾಪಿತ್ರಾದಿಗಳು ಎತ್ತಿ ಹಿಡಿದು ವರಶಿರಸ್ಸಿಗೆ ಹಾಕಿಸುತ್ತಾರೆ. ಈಗ ವರ ''ನನ್ನ ಕಾಮನೆಗಳೂ ಯಜ್ಞವೂ ಸಾಂಗವಾಗಲಿ'' ಎನ್ನುತ್ತಾ ವಧೂಶಿರಸ್ಸಿಗೆ ಅಕ್ಕಿಯನ್ನು ಸುರಿಯುತ್ತಾನೆ. ಇಲ್ಲಿ ಆಕೆ ಭಾಗ್ಯವನ್ನು ಕೇಳಿದರೆ, ಈತ ಯಜ್ಞವನ್ನು ಕೇಳಿದ್ದಾನೆ. ಇನ್ನೆರಡು ಬಾರಿ ಇದೇ ರೀತಿ ಧಾನ್ಯಧಾರೆ ಸುರಿಯುವಾಗ ಕನ್ಯೆ ಶ್ರೀಯನ್ನು (ಸಂಪತ್ತನ್ನು) ಕೇಳಿದರೆ ವರ ಧರ್ಮವನ್ನು ಅಭಿಲಷಿಸುತ್ತಾನೆ. ಆಕೆ ಪ್ರಜೆಯ(ಮಕ್ಕಳ)ನ್ನು ಬೇಡಿದರೆ ಈತನು ಯಶಸ್ಸನ್ನು ಹಾರೈಸುತ್ತಾನೆ. ಯಜ್ಞ-ಭಗ, ಧರ್ಮ-ಶ್ರೀ, ಯಶಸ್ಸು-ಪ್ರಜಾ ಇವುಗಳ ಜೊತೆ ಬಹು ಸುಂದರವಾದುದು. ಚಿಂತಕರಿಗೆ ಮುದ ಕೊಡುವಂತಹದು. ಇವುಗಳ ಹಾರೈಕೆಯೊಂದಿಗೆ ಮೂರು ಬಾರಿ ಅಕ್ಕಿಧಾರೆ ನಡೆಯುತ್ತದೆ.

ಈ ಕೌತುಕಬಂಧ - ತಂಡುಲಾರೋಪಣಗಳು ಗೃಹ್ಯಸೂತ್ರದಲ್ಲಿ ಹೇಳಿದ್ದರೂ, ಶೌನಕೀಯ ಕಾರಿಕೆಯಲ್ಲಿ ಉಪಲಬ್ಧವಿಲ್ಲ. ಹಾಗಾಗಿ ಅನೇಕ ಪರಿಸರಗಳಲ್ಲಿ ಇವುಗಳ ಅನುಷ್ಠಾನವಿಲ್ಲ. ಕನ್ಯಾದಾನವಾದೊಡನೆ ಲಾಜಹೋಮವನ್ನು ನಡೆಸುತ್ತಾರೆ.

ಮಾಂಗಲ್ಯಧಾರಣೆಯನ್ನು ಲಾಜಹೋಮಕ್ಕೆ ಮುಂಚೆಯೇ ನಡೆಸುವುದೂ ಇದೆ. ಅಗ್ನಿಸಾಕ್ಷಿಕವಾಗಿ ನಡೆಯಲಿ ಎಂಬ ಭಾವದಿಂದ ಹೋಮದ ಮಧ್ಯೆ ನಿರೂಪಿಸೋಣ.

## ವಿವಾಹಹೋಮ

**ಲಾಜಹೋಮ, ಪಾಣಿಗ್ರಹಣ, ಪರಿಣಯನ, ಅಶ್ಮಾರೋಪಣ, ಸಪ್ತಪದೀ, ಮಾಂಗಲ್ಯಧಾರಣೆ** ಎಂಬ ಆರು ಅಂಶಗಳು ವಿವಾಹಹೋಮದ ಒಳಗೆ ಸೇರಿಕೊಂಡಿವೆ.

ಪ್ರತಿಗೃಹೀತಳಾದ ವಧು ಲಾಜಹೋಮದಿಂದಾಗಿ **ಭಾರ್ಯಾ** ಎನಿಸುತ್ತಾಳೆ. ಪಾಣಿಗ್ರಹಣದಿಂದಾಗಿ **ಪಾಣಿಗೃಹೀತೀ** ಎನ್ನಿಸುತ್ತಾಳೆ. ಪರಿಣಯನದಿಂದ **ಪರಿಣೀತಳಾ**-ಗುತ್ತಾಳೆ. ಸಪ್ತಪದಿಯಿಂದ **ಸಹಧರ್ಮಿಣಿ**ಯೆನ್ನಿಸುತ್ತಾಳೆ. ವಿವಾಹಹೋಮ ಮುಗಿಸಿ ಗೃಹ್ಯಾಗ್ನಿ ಪರಿಗ್ರಹದಲ್ಲಿ ಭಾಗಿನಿಯಾದ್ದರಿಂದ **ಪತ್ನೀ** ಎನಿಸಿದ್ದಾಳೆ. ಪತಿಯದ್ದೇ ಇನ್ನೊಂದು ಸ್ವರೂಪವಾದ ಗರ್ಭವನ್ನು ಧರಿಸಿ ಹೆರುವುದರಿಂದ **ಜಾಯಾ** ಎಂಬ ಹೆಸರು. **(ಜಾಯಾಯಾಸ್ತದ್ಧಿ ಜಾಯಾತ್ವಂ ಯದಸ್ಯಾಂ ಜಾಯತೇ ಪುನಃ - ಮನು)**. ಎರಡು ಮಕ್ಕಳ ತಾಯಿಯಾಗಿ ಕುಟುಂಬದ ಭಾರ ಹೊತ್ತಾಗ **ಕುಟುಂಬಿನೀ** ಎನಿಸಿದ್ದಾಳೆ. ಮನೆಯ ಜವಾಬ್ದಾರಿಯನ್ನು ನೋಡುತ್ತಾ ಮನೆಗೆ ಹಿರಿಯ ಒಡತಿಯಾದಾಗ ಈಕೆಯೇ

ಪುರಂಧ್ರೀ ಎನಿಸುತ್ತಾಳೆ. ತನ್ನ ಉತ್ತಮಚಾರಿತ್ರ್ಯದಿಂದ ಸತೀ, ಸಾಧ್ವೀ, ಪತಿವ್ರತಾ ಎಂಬ ಹೆಸರಿಗೆ ಅರ್ಹಳಾಗುತ್ತಾಳೆ.

ಹೆಂಡತಿ ಎಂಬ ಹೆಸರು ಹೇಗೆ ಬಂತೋ? 'ಹೆಂಡತಿ ಪ್ರಾಣ ಹಿಂಡುತಿ' ಎಂದ ದಾಸರು ಪ್ರಾಸದ ಜೊತೆಗೆ ಶಬ್ದವ್ಯುತ್ಪತ್ತಿಯನ್ನೂ ತೋರ ಹೊರಟಿದ್ದಾರೇನೋ?

ಹೀಗೆ ಹತ್ತು ಹಲವು ಹೆಸರುಗಳನ್ನು ಪಡೆಯುವ ಪತ್ನಿಗೆ ಲಗ್ನಪತ್ರಿಕೆಯಲ್ಲಿ ಮುದ್ರಿತವಾದ ಹೆಸರು ಇದ್ದೇ ಇರುತ್ತದೆ. ಅದನ್ನೂ ಬದಲಿಸುವವರು ಕೆಲವರಿದ್ದಾರೆ.

## ಹೊಸ ಮಡದಿಗೆ ಮರುನಾಮಕರಣ

ಮದುವೆಯಾಗಿ ಮನೆಗೆ ಬಂದ ವಧುವಿಗೆ ವರನ ಕಡೆಯಿಂದ ಬೇರೆ ಹೆಸರಿಡುವ ಸಂಪ್ರದಾಯ ಅನೇಕ ಮನೆಗಳಲ್ಲಿದೆ. ಇದರ ಬಗ್ಗೆ ಶಾಸ್ತ್ರಾಧಾರವಿಲ್ಲ. ಕೆಲವೊಮ್ಮೆ ಕನ್ಯೆಯ ತಂದೆ ಸುಂದರವಾದ ಲಕ್ಷ್ಮೀ ಎಂದು ಹೆರಿಟ್ಟಿದ್ದರೂ ಗಂಡನ ಮನೆಯವರು 'ಥೇಮ್ಸ್' ಎಂಬ ಅಧ್ಭುತಹೆಸರಾಗಿ ಬದಲಾಯಿಸಿಕೊಳ್ಳುವುದಿದೆ. ತಮ್ಮ ಸರ್ವಾಧಿಕಾರದ ದಬ್ಬಾಳಿಕೆಯ ಕುರುಹಾಗಿ ಹೆಸರು ಬದಲಿಸುವವರೂ ಇದ್ದಾರೆ. ವಾಸ್ತವವೇನು?

ಅನಿವಾರ್ಯತೆ ಇದ್ದಾಗ ಮಾತ್ರ ಹೆಸರು ಬದಲಿಸಬೇಕು. ಅದೇ ಹೆಸರಿನ ಹಿರಿಯರೋ, ನಾದಿನಿಯೋ ಮನೆಯಲ್ಲಿದ್ದಾಗ ಹೆಸರು ಬದಲಾಯಿಸುವುದು ಉಚಿತ. ಅಥವಾ ಈಗಿರುವ ಹೆಸರು ಅಶಾಸ್ತ್ರೀಯವಾಗಿದ್ದು ಕರೆಯುವುದಕ್ಕೆ ಸರಿಹೋಗದಿದ್ದಾಗಲೂ ಇದು ಸರಿ. ಧರ್ಮಶಾಸ್ತ್ರ ಹೇಳುವಂತೆ ಅಶ್ವಿನೀ, ಭರಣೀ ಮೊದಲಾದ ನಕ್ಷತ್ರಗಳ ಹೆಸರನ್ನು ಇಡುವಂತಿಲ್ಲ. ಗಂಗಾಬಾಯಿ, ಗೋದಾವರೀಬಾಯಿ ಎಂಬ ನದಿಯ ನಾಮವೂ ಕೂಡದು. ಚಂಪಕಾ, ಕೇತಕೀ ಎಂಬ ವೃಕ್ಷನಾಮವೂ ನಿಷಿದ್ಧ. ಪಕ್ಷಿ- ಪರ್ವತ ಪಿಶಾಚಗಳ ಹೆಸರೂ ಕೂಡದು. ಇದು ಬೋಧಾಯನಗೃಹ್ಯಸೂತ್ರ —

**ನಕ್ಷತ್ರನಾಮಾ ನದೀನಾಮಾ ವೃಕ್ಷನಾಮಾಃ ಪರ್ವತನಾಮಾಃ ಪ್ರೇಷ್ಯನಾಮಾಃ ಪಕ್ಷಿನಾಮಾಃ ಪಿಶಾಚನಾಮಾಶ್ಚ ಗರ್ಹಿತಾಃ ।**

''**ನರ್ಕ್ಷವೃಕ್ಷನದೀನಾಮ್ನೀಂ**.....'' ಎಂದು ಮನುವೂ ಇದನ್ನು ಅನುಮೋದಿಸಿದ್ದಾನೆ.

ಈ ರೀತಿಯ ನಿಷಿದ್ಧನಾಮವಿದ್ದವರ ಹೆಸರನ್ನು ಶಾಸ್ತ್ರೀಯನಾಮವಾಗಿ ಬದಲಾಯಿಸಿಕೊಂಡರೆ ಅದೂ ಸರಿಯೆನಿಸೀತು. ಆದರೆ ಮುಂದಿನ ಧರ್ಮಕರ್ಮಗಳಲ್ಲಿ

ಸಂಕಲ್ಪದೊಂದಿಗೆ ಹೇಳುವ ಹೆಸರು ನಾಮಕರಣಸಂಸ್ಕಾರದಲ್ಲಿ ಅಕ್ಕಿಯಲ್ಲಿ ತಂದೆ ಬರೆದ ಹೆಸರೇ. ಈ ಹೊಸ ಹೆಸರು ಕೂಗಿ ಕರೆದು ವ್ಯವಹರಿಸುವುದಕ್ಕಾಗಿ ಮಾತ್ರ.

## ಲಾಜಹೋಮ

ವಧುವು ಗೃಹಿಣಿ (ಭಾರ್ಯೆ)ಯೆನಿಸುವುದಕ್ಕಾಗಿ ಲಾಜಹೋಮ. ಗೃಹಸ್ಥನಾಗಿ ನಡೆಸಬೇಕಾದ ಯಜ್ಞಾದಿಕರ್ಮಗಳಿಗಾಗಿ ಗೃಹ್ಯಾಗ್ನಿ(ಔಪಾಸನಾಗ್ನಿ) ಸ್ವೀಕಾರಕ್ಕಾಗಿಯೂ ಈ ಹೋಮ.

ಇದೇ ಮೊದಲಬಾರಿ ವರ ವಾಮಾಂಗಿಯನ್ನು ಬಲಭಾಗದಲ್ಲಿ ಕೂಡಿಸಿಕೊಂಡಿದ್ದಾನೆ. ಅವನ ಮುಂದೆ ಯಜ್ಞಕುಂಡವಿದೆ. 'ಯೋಜಕ' ಎಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಿದ್ದಾರೆ. ಎರಡು ಮನಸ್ಸನ್ನು ಒಂದಾಗಿ ಯೋಜಿಸುವ ಅಗ್ನಿ 'ಯೋಜಕ'. 49 ಅಗ್ನಿಗಳಲ್ಲಿ ಒಬ್ಬ.

ಅಗ್ನಿಪ್ರತಿಷ್ಠೆಗಾಗಿ ಬಹ್ವಂಗಾರಸಮೃದ್ಧವಾದ ಶ್ರೋತ್ರಿಯಾಗ್ನಿಯನ್ನು ತಂದು ಕೊಟ್ಟವಳು ನವವಧುವಿನ ತಾಯಿ. ಆಕೆಗೆ ವಸ್ತ್ರಸಂಭಾವನೆಯೊಡನೆ 'ಅಗ್ನಿಮರ್ಯಾದೆ'-ಯಿತ್ತು ಸನ್ಮಾನಿಸಲಾಗಿದೆ.

ಈ ಹೋಮದ ಪ್ರಧಾನದೇವತೆ ಪ್ರಜಾಪತಿ. ಸೃಷ್ಟಿಕರ್ತಾರನಾದ ಹಾಗೂ ಬ್ರಾಹ್ಮವಿವಾಹದ ಅಧಿದೇವನಾದ ಪ್ರಜಾಪತಿಗೆ ತುಪ್ಪದಿಂದಲೂ ಲಾಜದಿಂದಲೂ ಆಹುತಿಯಿದೆ. ಪವಮಾನಾಗ್ನಿಯನ್ನೂ ಪ್ರಧಾನಾಗ್ನಿಯನ್ನೂ ಆಜ್ಯಾಹುತಿಯಿಂದ ತೃಪ್ತಿ-ಗೊಳಿಸಬೇಕು. ಅರ್ಯಮಾ, ವರುಣ, ಪೂಷಾ ಎಂಬ ಮೂರುದೇವತೆಗಳಿಗೂ ಅರಳಿನಿಂದ ಹೋಮಿಸಬೇಕು.

ಲಾಜವೆಂದರೆ ಭತ್ತದ ಅರಳು. ಸಮೃದ್ಧಿಯ ಸಂಕೇತ ಇದು. ಲಾಜಹೋಮವನ್ನು ಪತಿ ತನ್ನ ನವವಧುವಿನ ಕೈಯಿಂದಲೇ ಮಾಡಿಸುತ್ತಾನೆ. ಪತ್ನಿಯೇ ಆಹುತಿಯನ್ನು ನೀಡುವ ಏಕೈಕ ಹೋಮ ಲಾಜಹೋಮ. ಅದರಲ್ಲೂ ಲಾಜವು ಪತ್ನಿಯ ಕೈಯಿಂದ ನೇರವಾಗಿ ಅಗ್ನಿಗೆ ಬೀಳುವುದಿಲ್ಲ. ಅದು ಮೊರದ ಮೂಲಕ ಅಗ್ನಿಗೆ ಸಲ್ಲುತ್ತದೆ.

ವಿಪ್ರಕನ್ನಿಕೆಯ ವಿವಾಹವೆಂದರೆ ದೇವಕನ್ನಿಕೆಯರಿಗೆ ಉತ್ಸವ. ಕೆಲವು ದೇವ-ಕನ್ನಿಕೆಯರು ಅವ್ಯಕ್ತವಾಗಿ ದಿವ್ಯಾಲಂಕರಣಗಳೊಂದಿಗೆ ವಿವಾಹಕ್ಕೆ ಆಗಮಿಸಿದ್ದಾರೆ. ಇವರಲ್ಲಿ ಕೆಲವರು ಅರ್ಯಮನ ಮಕ್ಕಳು. ಕೆಲವರು ವರುಣನ ಸುತೆಯರು. ಇನ್ನೂ ಕೆಲವರು ಪೂಷನ್ ದೇವತೆಯ ಮಕ್ಕಳು. ಮತ್ತೆ ಕೆಲವರು ಪ್ರಜಾಪತಿ ತನುಜೆಯರು.

ದೇವಕನ್ಯಾಃ ಸಮಾಯಾಂತಿ ವಿವಾಹಂ ದ್ರಷ್ಟುಮುತ್ಸುಕಾಃ।
ಅರ್ಯಮ್ಣಸ್ತನುಜಾಃ ಕಾಶ್ಚ ವರುಣಸ್ಯ ಚ ಕಾಶ್ಚನ।
ಪೂಷ್ಣಃ ಪ್ರಜಾಪತೇಶ್ಚಾಪಿ ಕಾಶ್ಚನಾಯಾಂತಿ ಚ ಸ್ತ್ರಿಯಃ॥
-- ಆಶ್ವಲಾಯನ ಸ್ಮೃತಿರತ್ನ

ಇವರಿಗೆ ಮೊರವೆಂದರೆ ಇಷ್ಟ. ಕನ್ನಿಕೆಯರಿಗೆ ಕನ್ನಿಕೆಯರು ಕೊಡುವುದೇ ಪ್ರಿಯ-ವೆನ್ನಿಸುತ್ತದೆ. ಹಾಗಾಗಿ ವಧು ತಾನೇ ಗಂಡನೊಡಗೂಡಿ ಮೊರದ ಮೂಲಕ ಈ ಕನ್ನಿಕೆಯರ ತಂದೆಯರಾದ ನಾಲ್ವರಿಗೆ ಹೋಮಿಸುತ್ತಾಳೆ. ಆ ದೇವಕನ್ನಿಕೆಯರು ಪ್ರೀತರಾಗಿ ವಧುವಿಗೆ ವಾಂಛಿತಾರ್ಥವನ್ನಿತ್ತು ತೆರಳುತ್ತಾರೆ.

ಈ ಲಾಜಹೋಮ ನಡೆಯುತ್ತಿರುವಂತೆಯೇ ವೇದಜ್ಞವಿಪ್ರರು ಸೂರ್ಯಾವರ್ಗ-ವನ್ನು ಪಠಿಸುತ್ತಾರೆ.

## ಸೂರ್ಯಾವರ್ಗ

ಋಗ್ವೇದದ ಹತ್ತನೆಯ ಮಂಡಲದಲ್ಲಿ ಮನ್ಯುಸೂಕ್ತವಾದೊಡನೆ ಬರುವ 47ಮಂತ್ರಗಳಿಗೆ **ಸೂರ್ಯಾವರ್ಗ** ಅಥವಾ **ಸೂರ್ಯಾಸೂಕ್ತ** ಎಂದು ಹೆಸರು. ಸೂರ್ಯಾ ಎಂಬ ದೇವಿಯಿದ್ದಾಳೆ. ಈಕೆ ಸವಿತೃದೇವನ ಮಗಳು. ಆದ್ದರಿಂದಲೇ ಸಾವಿತ್ರಿ . ಯಮುನೆ, ತಪತಿಯರ ಅಕ್ಕ. ಈ ಸೂರ್ಯಾಸಾವಿತ್ರಿ ಎಂಬ ದೇವಿಯೇ ಕಂಡ ಮಂತ್ರಗಳು ಇವು. ಹಾಗಾಗಿ ಇವಕ್ಕೆ ಸೂರ್ಯಾಸಾವಿತ್ರಿಯೇ ಋಷಿಕೆ. ಆದ್ದರಿಂದಲೇ ಇದು ಸೂರ್ಯಾವರ್ಗ. ಸೂರ್ಯೆಯಿಂದ ದೃಷ್ಟವಾದ ವರ್ಗ.

ಈ ಮಂತ್ರಗಳಲ್ಲಿ ಹೆಚ್ಚಿನವು ವಿವಾಹದಲ್ಲಿ ವಿನಿಯುಕ್ತವಾಗುವ ಮಂತ್ರಗಳು. ವಧೂವರರನ್ನು ಆಶೀರ್ವದಿಸುವ 'ನವೋ ನವೋ' ಮೊದಲಾದ ಒಂಭತ್ತು ಆಶೀರ್ಮಂತ್ರಗಳು ಇಲ್ಲಿವೆ. ವಿವಾಹದೇವತೆಗಳಾದ ಚಂದ್ರ , ಸೂರ್ಯ, ಯಕ್ಷ್ಮಾಹಾ ದೇವತೆಗಳನ್ನು ಹಾಡಿ ಹೊಗಳುವ ಮಂತ್ರಗಳೂ ಇದರಲ್ಲಿವೆ.

ಈ 47ಮಂತ್ರಗಳ ಜೊತೆ ಋಗ್ವೇದಪರಿಶಿಷ್ಟದ 'ಅವಿಧವಾ ಭವ' ಎಂಬ ಆರು ಆಶೀರ್ಮಂತ್ರಗಳನ್ನು ಸೇರಿಸಿಕೊಂಡು ವಿಪ್ರರು ಪಠಿಸುತ್ತಾರೆ. ವಿವಾಹದ ಸಮೃದ್ಧಿ ಹಾಗೂ ಸಾಫಲ್ಯಕ್ಕೆ ಕಾರಣವಾಗುವ ಹತ್ತು ಹಲವು ಅಂಶಗಳಲ್ಲಿ ಸೂರ್ಯಾವರ್ಗ-ಪಠಣ ಬಹಳ ಮುಖ್ಯವಾದುದು.

ಇಂದಿಗೂ ಹಳ್ಳಿಗಳಲ್ಲಿ ನಡೆಯುವ ವಿವಾಹದಲ್ಲಿ ಗಂಡಸರು ಕುಳಿತು ಏಕಕಂಠದಲ್ಲಿ ಸೂರ್ಯಾವರ್ಗವನ್ನು ಪಾರಾಯಣ ಮಾಡುತ್ತಾರೆ. ಸುವಾಸಿನಿಯರು ಲಕ್ಷ್ಮೀಶೋಭಾನ

ಪದವನ್ನು ಹಾಡುತ್ತಾರೆ. ಈ ಸಮಯದಲ್ಲಿ ತಾವು ಕೈಯ್ಯಲ್ಲಿ ಹಿಡಿದಿದ್ದ ಮಂತ್ರಾಕ್ಷತೆಯನ್ನು ಮಾಂಗಲ್ಯಬಂಧನದ ಕಾಲದಲ್ಲಿ ವಧೂವರರಿಗೆ ಹಾಕಿ ಹರಸುತ್ತಾರೆ. ಉಭಯಪಕ್ಷದಿಂದ ಪಾರಾಯಣಕರ್ತೃವಿಪ್ರ ಹಾಗೂ ಸುವಾಸಿನಿಯರಿಗೆ ದಕ್ಷಿಣೆ ನೀಡಿ ಗೌರವಿಸಲಾಗುತ್ತದೆ.

## ಪಾಣಿಗ್ರಹಣ

ವರ ಪೂರ್ವಾಭಿಮುಖಿಯಾದ ವಧುವಿನ ಮುಂಭಾಗದಲ್ಲಿ ನಿಂತುಕೊಂಡು ಆಕೆಯ **ಊರ್ಧ್ವ**ಮುಖವಾದ ಬಲಗೈಯ್ಯನ್ನು ತನ್ನ ಅಧೋಮುಖವಾದ ಬಲಕೈಯಿಂದ ಹಿಡಿದು ಆಕೆಯನ್ನು ಎಬ್ಬಿಸುತ್ತಾನೆ. ಇದೇ **ಪಾಣಿಗ್ರಹಣ.** ಹಿಡಿದುಕೊಂಡೇ ಈತ **'ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ....'** ಎಂಬ ಮಂತ್ರವನ್ನು ಉದ್ಘೋಷಿಸುತ್ತಾನೆ. 'ವಧುವೇ! ನನ್ನ ಗಾರ್ಹಸ್ಥ್ಯಕ್ಕಾಗಿ ನಿನ್ನನ್ನು ದೇವತೆಗಳು ನನಗಿತ್ತಿರುವರು. ನನ್ನ ನಿನ್ನ ಸೌಭಾಗ್ಯಕ್ಕೋಸ್ಕರ ನಿನ್ನ ಪಾಣಿಯನ್ನು ಹಿಡಿಯುತ್ತಿರುವೆ. ಪಾಣಿಗ್ರಹಣದಿಂದಾಗಿ ನೀನು ನನ್ನ ಮುಪ್ಪು ಕಳೆಯುವವರೆಗೂ ಎಂದೆಂದೂ ನನ್ನ ಜೊತೆಗಿರುವಂತೆ ಅರ್ಯಮಾ ಸವಿತೃದೇವತೆಯರು ಅನುಗ್ರಹಿಸಲಿ'.

ಪಾಣಿಗ್ರಹಣ ಮಾಡುವಾಗ ವಧುವಿನ ಅಂಗುಷ್ಠದೊಂದಿಗೆ ಎಲ್ಲಾ ಬೆರಳುಗಳನ್ನೂ ಜೊತೆ ಸೇರಿಸಿ ತನ್ನ ಮುಷ್ಟಿಯಲ್ಲಿ ಬರುವಂತೆ ಹಿಡಿಯಬೇಕು. ಆಪಸ್ತಂಬರು ಹೀಗೆನ್ನುತ್ತಾರೆ — ಆಕೆಯಲ್ಲಿ ಹೆಣ್ಣುಮಕ್ಕಳನ್ನೇ ಪಡೆಯಬೇಕೆಂಬ ಆಸೆಯಿದ್ದರೆ ಅಂಗುಷ್ಠವನ್ನು ಬಿಟ್ಟು ನಾಲ್ಕು ಬೆರಳುಗಳನ್ನು ಮಾತ್ರ ಗ್ರಹಣ ಮಾಡಬೇಕು. ಗಂಡು ಮಕ್ಕಳನ್ನು ಮಾತ್ರ ಪಡೆಯಬೇಕೆಂಬ ಬಯಕೆಯಿದ್ದಲ್ಲಿ ಅಂಗುಷ್ಠವನ್ನು ಮಾತ್ರ ಗ್ರಹಿಸಬೇಕು. ಎರಡು ತರಹದ ಮಕ್ಕಳನ್ನೂ ಪಡೆಯ ಬೇಕೆಂಬ ತುಡಿತವಿದ್ದರೆ ಅಂಗುಷ್ಠವನ್ನು ಸೇರಿ ಐದೂ ಬೆರಳುಗಳನ್ನು ಒಟ್ಟಿಗೆ ಹಿಡಿಯಬೇಕು.''

ಇವಿಷ್ಟು ಆಪಸ್ತಂಬರ ಮಾತು. ಆಶ್ವಲಾಯನಸ್ಮೃತಿರತ್ನದ ಮಾತಿನಂತೆ ಕೈಯ್ಯನ್ನು ಬಿಗಿಯಾಗಿ ಹಿಡಿಯಬೇಕು. ಸಡಿಲವಾಗಿ ಹಿಡಿದರೆ ವರನು ಕನ್ನಿಕೆಯ ವಶನಾಗುತ್ತಾನೆ. ಕೈಹಿಡಿದಾಗ ಸಡಿಲಗೊಂಡು ಯಾವುದಾದರೊಂದು ಬೆರಳು ಹಿಡಿತ ತಪ್ಪಿದರೆ ವಧುವು ಚಂಚಲಳಾಗುತ್ತಾಳೆ. ಹಾಗಾಗಿ ಕೈಬೆರಳುಗಳು ಒತ್ತಟ್ಟಾಗಿರುವಂತೆ ಅಂಗುಲೀ ಮೂಲದ ಭಾಗದಲ್ಲಿ ಬಿಗಿಯಾಗಿ ಹಿಡಿಯ ಬೇಕು. ಶಿರೋಧಾರೆಯ ತನಕ ಬಿಡಬಾರದು.

ಗೃಹ್ಯಸೂತ್ರ ಹಾಗೂ ಕಾರಿಕೆಗಳಲ್ಲಿ ಪಾಣಿಗ್ರಹಣಕ್ಕೆ ಉಳಿದೆಲ್ಲಾ ಅಂಶಗಳಿಗಿಂತ ಹೆಚ್ಚು ಮಹತ್ವವನ್ನಿತ್ತಿದ್ದಾರೆ. ವಿವಾಹಲಗ್ನದಲ್ಲಿ ನಡೆಸಬೇಕಾದ ಮುಖ್ಯಕೆಲಸವೇ ಪಾಣಿಗ್ರಹಣವೇನೋ? ಎಂದೆನಿಸುವಷ್ಟು. ಕೆಲಸ ಚಿಕ್ಕದು. ಮಹತಿ ದೊಡ್ಡದು.

## ಪರಿಣಯನ

ಪರಿಣಯನವೆಂದರೆ ಸುತ್ತು ಬರುವುದು. ಪ್ರದಕ್ಷಿಣೆ ಹಾಕಿಸುವುದು. '**ಪರಿತಃ ನಯನಂ ಪರಿಣಯನಮ್**'' ವಧುವನ್ನು ಅಗ್ನಿಯ ಸುತ್ತಲೂ ಕರೆದೊಯ್ಯುವ ಪ್ರಕ್ರಿಯೆಯೇ **ಪರಿಣಯನ**. ಈ ಹೊತ್ತಿಗೆ ವಧೂವರರ ವಸ್ತ್ರಗಳಿಗೆ ಗಂಟುಹಾಕುವ ಕೆಲಸ ಮಾಡುವುದಕ್ಕೆ ಬೇರೆ ಕೆಲಸವಿಲ್ಲದ ಮಂದಿಯಿಂದ ನಡೆದಿದೆ. ಎಲ್ಲೋ ಒಂದೆಡೆ ವಸ್ತ್ರಕ್ಕೆ ಬಿದ್ದ ಗಂಟಿನಿಂದ ಈಗೀಗ ವಸ್ತ್ರಗಳಿಗೆ ಗಂಟು ಹಾಕದಿದ್ದರೆ ಅದು ಪರಿಣಯನವೇ ಅಲ್ಲವೆಂಬಷ್ಟು ದೃಢಭಾವ ಎಲ್ಲೆಡೆ ವ್ಯಾಪಿಸಿಬಿಟ್ಟಿದೆ. ಕೆಲವೊಂದು ಸಂಪ್ರದಾಯಗಳು ಬೆಳೆಯುವುದೇ ಹೀಗೆ.

ಬಹುಶಃ ಪಾಣಿಗ್ರಹಣದ ಹಿಡಿತ ತಪ್ಪಿದರೂ ವಸ್ತ್ರದ ಗಂಟಾದರೂ ದೃಢವಾಗಿರಲಿ ಎಂಬ ಭಾವ ಇದರಲ್ಲಿರಬಹುದು. ಬ್ರಹ್ಮಕರ್ಮಸಮುಚ್ಚಯದ ಪ್ರಯೋಗದಲ್ಲಿ ಮೊದಲ ಬಾರಿಗೆ ಈ ಮಾತು ಬಂದಿದೆ. '**ಪೂರ್ವಬದ್ಧೋತ್ತರೀಯಾಂತೌ ವಿಸ್ರಸ್ಯ**' - ಹಿಂದೆ ಕಟ್ಟಿದ್ದ ವಧೂವರರ ವಸ್ತ್ರದ ಗಂಟನ್ನು ಧ್ರುವಾರುಂಧತೀದರ್ಶನದ ವೇಳೆ ಬಿಚ್ಚಬೇಕು.

ಪರಿಣಯನ ಕಾಲದಲ್ಲಿ ಹೇಳುವ **ಅಮೋಹಮಸ್ಮಿ** ಎಂಬ ಮಂತ್ರ ಅವಶ್ಯ ಅನುಸಂಧೇಯ. ''ನಾನು ಅಮ. ನೀನು ಸಾ. ನಾನೂ ನೀನೂ ಸೇರಿ (ಸಾ+ಅಮ) ಸಾಮ. ನಾನು ದ್ಯೌ. ನೀನು ಪೃಥಿವೀ. ನಾವೀರ್ವರೂ ದ್ಯಾವಾಪೃಥಿವೀ. ನಾನು ಸಾಮ; ನೀನು ಋಕ್ ನಾವೀರ್ವರೂ ಋಕ್ಸಾಮ. ಋಕ್ಸಾಮ ಎನಿಸಿದ ಭಾರತಿಪ್ರಾಣರಂತೆ ದ್ಯಾವಾಪೃಥಿವೀ ಎನಿಸಿದ ವಾಣೀಹಿರಣ್ಯಗರ್ಭರಂತೆ. ಸಾ+ಅಮ ಎನಿಸಿದ ಲಕ್ಷ್ಮೀನಾರಾಯಣರಂತೆ ನಾವೂ ಪರಸ್ಪರ ಸಂಪ್ರೀತಿ ಹೊಂದೋಣ. ಸನ್ಮನಸ್ಸಿನಿಂದ ನೂರು ಶರತ್ಕಾಲ ಬಾಳೋಣ. ಸತ್ಸಂತತಿಯನ್ನು ಪಡೆಯೋಣ''.

ಪಾಣಿಗ್ರಹಣ ಮಾಡಿದ ವರ ಅಗ್ನಿಗೆ ಮೂರು ಬಾರಿ ಪ್ರದಕ್ಷಿಣೆ ಬರುವಲ್ಲಿಯ ತನಕವೂ ಹಿಡಿದ ಕೈಯ್ಯನ್ನು ಬಿಡುವುದಿಲ್ಲ. ಅಶ್ಮಾರೋಪಣವೂ ಈಗಲೇ.

## ಅಶ್ಮಾರೋಪಣ

ಅಗ್ನಿಯ ಸನಿಹದಲ್ಲಿ ಒಂದು ಕಲ್ಲು ಇಟ್ಟು ಆ ಕಲ್ಲಿನ ಮೇಲೆ ವಧುವನ್ನು ವರ ಏರಿಸುತ್ತಾನೆ. ಅಶ್ಮ ಎಂದರೆ ಕಲ್ಲು. ಕಲ್ಲಿನ ಮೇಲೇರಿಸುವುದಕ್ಕೆ **ಅಶ್ಮಾರೋಪಣ** ಎಂದು ಹೆಸರು. ''ನೀನು ಕಲ್ಲಿನಂತೆ ಸ್ಥಿರಮನಸ್ಕಳಾಗು. ಕಲ್ಲನ್ನೇರು. ಆಸೆಗಳಿಂದ ಚಂಚಲ-

ಳಾಗದಿರು. ಯುದ್ಧ ಹೂಡಿ ಬಂದ ಆಸೆಗಳ ಸೇನೆಯನ್ನು ಮೆಟ್ಟಿ ಹಿಂದಿಕ್ಕಿಬಿಡು' ಎಂಬ ಉದಾತ್ತಭಾವದ ಮಂತ್ರವನ್ನು ವರ ಹೇಳುತ್ತಾನೆ. ಮೂರು ಬಾರಿ ಪರಿಣಯನಕ್ಕೆ ಮೂರು ಬಾರಿ ಅಶ್ಮಾರೋಪಣ.

## ಸಪ್ತಪದಿ

ಗೆಳೆತನ ಎಂಬ ಭಾವ ಮನದಾಳದಲ್ಲಿ ಮೂಡಿ ಬರಬೇಕಾದರೆ ಏಳು ಹೆಜ್ಜೆ ಜೊತೆ ನಡೆಯಬೇಕಂತೆ. ಸತೀ ಸಾವಿತ್ರಿ ಯಮನ ಮುಂದೆ ಈ ಮಾತನ್ನು ಹೇಳಿದ್ದಳು. ಮಂತ್ರದೊಂದಿಗೆ ಪತ್ನಿಯನ್ನು ಏಳು ಹೆಜ್ಜೆಯಿರಿಸುವ ಪದ್ಧತಿಗೆ **ಸಪ್ತಪದೀ** ಎಂದು ಹೆಸರು.

ಪತಿ ಪತ್ನಿಯ ಪಾಣಿ ಪಿಡಿದೇ ಯಜ್ಞಾಗ್ನಿಯ ಉತ್ತರಕ್ಕೆ ಬರುತ್ತಾನೆ. ಅಲ್ಲಿ ಪರಿಕಲ್ಪಿತವಾದ ಸಪ್ತ ತಂಡುಲರಾಶಿಯಲ್ಲಿ ಪತ್ನಿಯ ಬಲಗಾಲಹೆಜ್ಜೆಯನ್ನು ಮಂತ್ರ-ದೊಂದಿಗೆ ಒಂದೊಂದಾಗಿ ಇರಿಸುತ್ತಾನೆ. ಈಶಾನ್ಯದೆಡೆಗೆ ಅಥವಾ ಪೂರ್ವದೆಡೆಗೆ ಸಾಗುತ್ತಾನೆ.

ಆ ಏಳುಮಂತ್ರಗಳನ್ನು ಹೀಗೊಂದು ಭಾವಾನುವಾದ ಮಾಡಬಹುದು –

ಅನ್ನಮಯ ದೇವಪೂಜೆಗೆ ಮೊದಲ ಹೆಜ್ಜೆ;<br>
ಬಲವೀರ್ಯವೃದ್ಧಿಗೆ ಎರಡನೆಯ ಹೆಜ್ಜೆ;<br>
ಧನಧಾನ್ಯಸಮೃದ್ಧಿಗಾಗಿ ಮೂರನೆಯ ಹೆಜ್ಜೆ;<br>
ಭವ್ಯಸುಖಪ್ರಾಪ್ತಿಗಾಗಿ ನಾಲ್ಕನೆಯ ಹೆಜ್ಜೆ;<br>
ಸಂತತಿಯ ಸೊಗಸಿಗೆ ಐದನೆಯ ಹೆಜ್ಜೆ;<br>
ಅನುಕೂಲ ನಡೆನುಡಿಗೆ ಆರನೆಯ ಹೆಜ್ಜೆ;<br>
ಅನುಗಾಲ ಸಖ್ಯಕ್ಕೆ ಏಳನೆಯ ಹೆಜ್ಜೆ;<br>
ಚಿರಕಾಲ ನಡೆ ಜೊತೆಗೆ ಝುಲ್ಲೆನುತ ಗೆಜ್ಜೆ.

ಈ ಭಾವದ ಮಂತ್ರಗಳೊಂದಿಗೆ ಬಲಗಾಲನ್ನು ಮಾತ್ರ ಮುಂದಿರಿಸಿಕೊಳ್ಳುತ್ತಾ ಏಳು ಹೆಜ್ಜೆ ಸಾಗಬೇಕು. ಈಗ ಈಕೆಯ ಗೋತ್ರ ಪರಿವರ್ತನೆಯಾಗಿದೆ. ಪತಿಯ ಗೋತ್ರವನ್ನು ಪ್ರವೇಶಿಸಿದ್ದಾಳೆ ಈಕೆ. ಯಾಜ್ಞವಲ್ಕ್ಯರ ಮಾತು –

**ನೋದಕೇನ ನ ವಾಚಾ ವಾ ಕನ್ಯಾಯಾಃ ಪತಿರುಚ್ಯತೇ ।**<br>
**ಪಾಣಿಗ್ರಹಣಸಂಸ್ಕಾರಾತ್ ಪತಿತ್ವಂ ಸಪ್ತಮೇ ಪದೇ ॥**

ವಾಗ್ದಾನದಿಂದ ಅಥವಾ ಧಾರೆಯೆರೆದು ಕೊಟ್ಟುದದರಿಂದ ಈತ ಪತಿಯೆನಿಸು-ವುದಿಲ್ಲ. ಪತಿಪತ್ನೀಭಾವ ಸಿದ್ಧಿಸುವುದು ಪಾಣಿಗ್ರಹಣದಿಂದ. ಕೈಹಿಡಿದು ಸಪ್ತಪದಿ ತುಳಿಯುವುದರಿಂದ.

## ಶಿರೋಧಾರೆ

ವರನು ನವವಿವಾಹಿತೆಯ ಅತ್ಯಂತ ಸನಿಹದಲ್ಲಿ ಅಭಿಮುಖವಾಗಿ ಪಶ್ಚಿಮಕ್ಕೆ ಮುಖಮಾಡಿ ನಿಲ್ಲುತ್ತಾನೆ. ಪತ್ನಿಯ ತಲೆಗೆ ತನ್ನ ತಲೆ ತಾಗುವಂತೆ ಬಗ್ಗುತ್ತಾನೆ. ಪಾಣಿಗ್ರಹಣದ ಹಿಡಿತ ಇನ್ನೂ ಸಡಿಲಗೊಂಡಿಲ್ಲ. ಪರಸ್ಪರ ತಾಗಿದ ತಲೆಯ ಮಧ್ಯೆ ಒಂದು ಕನ್ನಡಿಯನ್ನಿಡುವ ಸಂಪ್ರದಾಯ ಕೆಲವೆಡೆ. ಪೂರ್ವಸ್ಥಾಪಿತ ಕಲಶೋದಕದಿಂದ ಉಭಯಶಿರಸ್ಸಿಗೆ ಅಭಿಷೇಕದೊಂದಿಗೆ ಜಲಧಾರೆ ಸುರಿಯುವುದೇ ಶಿರೋಧಾರೆ.

ಈ ಹೊತ್ತಿಗೆ ವಿಪ್ರರು ಹೇಳುವ ಹದಿನೈದು ಮಾತು ಜೀವನದ ಸಕಲಾಭೀಪ್ಸೆಯನ್ನು ತುಂಬುತ್ತದೆ.

೧. ನಿಮಗೆ ದಾಂಪತ್ಯದ ಹೊಸಬಾಳಿನಲ್ಲಿ ಶಾಂತಿ ನೆಮ್ಮದಿಯಿರಲಿ.

೨. ಶರೀರದಾರ್ಢ್ಯ ಮನೋದಾರ್ಢ್ಯವಿರಲಿ.

೩. ಲಭಿಸಿದುದರಲ್ಲಿ ತೃಪ್ತಿ ಸಂತೃಪ್ತಿಯಿರಲಿ.

೪. ಕೈಹಾಕಿದ ಕೆಲಸದಲ್ಲಿ ವೃದ್ಧಿ ಯಶಸ್ಸು ಲಭಿಸಲಿ.

೫. ವಿಘ್ನಗಳು ತಾಪತ್ರಯಗಳು ದೂರವಾಗಲಿ.

೬. ಚಿರಕಾಲ ಪೂರ್ಣಾಯುಷ್ಯದಿಂದ ಜೊತೆಗೆ ಬಾಳಿರಿ.

೭. ರೋಗರುಜಿನಗಳ ಬಾಧೆ ಇರದಿರಲಿ.

೮. ಸೀಮಂತ ಉಪನಯನ ಮುಂತಾದ ಮಂಗಳಕರ್ಮಗಳು ನಿರಂತರ ನಡೆದಿರಲಿ.

೯. ಅತಿಥಿಬಾಂಧವರ ಪೂಜೆ ಮುಂತಾದ ಗೃಹ್ಯಕರ್ಮಗಳು ಅವ್ಯಾಹತವಾಗಿ ನಡೆಯಲಿ.

೧೦. ಬಡಬಗ್ಗರಿಗೆ ದಾನಧರ್ಮಗಳು ನಡೆಯಲಿ.

೧೧. ಹಿಂದೆ ಓದಿದ ವೇದವಿದ್ಯೆ ಶಿಷ್ಯಸಮೃದ್ಧಿಯಿಂದ ಬಿತ್ತರಿಸಲ್ಪಡಲಿ.

೧೨. ಶಾಸ್ತ್ರತತ್ವಜ್ಞಾನ ದೃಢವಾಗಲಿ.

೧೩. ಪುತ್ರಪೌತ್ರಾದ್ಯವಿಚ್ಛಿನ್ನಸಂತತಿಯೂ ಜ್ಞಾನಸಂವಹನದಲ್ಲಿ ತತ್ಪರವಾಗಲಿ.

೧೪. ಧನಧಾನ್ಯಾದಿ ಐಹಿಕ ಸಮೃದ್ಧಿಯೂ ಇರಲಿ.

೧೫. ಕಾಮನೆಗಳೆಲ್ಲ ಈಡೇರಲಿ.

ಈ ''ಶಾಂತಿರಸ್ತು, ಪುಷ್ಟಿರಸ್ತು'' ಮೊದಲಾದ ಹದಿನೈದು ಮಂತ್ರಗಳಿಂದ ಶಿರೋಧಾರೆ ನಡೆದಿದೆ. ಈಗ ವಧೂವರರು ವಸ್ತ್ರಾಚ್ಛಾದಿತ ಮಂಗಲಾಸನದಲ್ಲಿ ಕುಳಿತು ಪಾಣಿಗ್ರಹಣದಿಂದಾರಂಭಿಸಿ ಬಿಗಿಹಿಡಿದ ಕೈಯ್ಯನ್ನು ಭೂಸ್ಪರ್ಶ ಮಾಡುತ್ತಾರೆ. ಕೆಲವರ ಪ್ರಕಾರ ಧ್ರುವಾರುಂಧತೀದರ್ಶನವೂ ಇಲ್ಲೇ ನಡೆಯುತ್ತದೆ. ಪ್ರತಿಷ್ಠಾಮಂತ್ರವನ್ನು ಉದ್ಘೋಷಿಸುತ್ತಿದ್ದಂತೆ ಬಿಡಿಸಿಕೊಳ್ಳುತ್ತಾರೆ. ಹಿಂದೆ ಕಟ್ಟಿದ ವಸ್ತ್ರದ ಗಂಟೂ ಕಳಚಲ್ಪಟ್ಟಿದೆ. ಇದೀಗ ಈರ್ವರೂ ಕುಲದೇವರನ್ನು ಪ್ರಾರ್ಥಿಸುತ್ತಾರೆ. ಈಗ ವಧುವಿನ ಕುಲದೇವತೆ ವರನ ಕುಲದೇವತೆಗಿಂತ ಬೇರೆಯಲ್ಲ. ವರನ ಕುಲದೇವರೇ ಆವಳಿಗೂ.

## ಮಾಂಗಲ್ಯಧಾರಣ

'ಈಕೆ ವಿವಾಹಿತಳಿದ್ದಾಳೆ' ಎಂದು ನೋಡಿದೊಡನೆ ಗೊತ್ತಾಗುವುದು ಮಾಂಗಲ್ಯ-ದಿಂದ. ಮಾಂಗಲ್ಯವನ್ನು ತಲೆ ಎತ್ತಿ ನಿರೀಕ್ಷಿಸುವುದಕ್ಕೆ ಸಂಕೋಚವಾದರೂ ಪಾದದರ್ಶನದಿಂದಲೇ ಗೊತ್ತಾಗುವುದು ಕಾಲುಂಗುರದಿಂದ. ಕಾಲುಂಗುರ ಹಾಗೂ ಮಾಂಗಲ್ಯ ವಿವಾಹಿತೆಗೆ ಮಾತ್ರ ಇರುವ ಶುಭಲಕ್ಷಣ. ಆವೆರಡರ ಧಾರಣೆ ಇದೀಗ ನಡೆಯುತ್ತದೆ.

ಭಾರತೀಯ ಸನಾತನಧರ್ಮದ ನಾರಿಯರು ಮಾಂಗಲ್ಯವನ್ನು ಶ್ರದ್ಧಾಭಕ್ತಿಯಿಂದ ಕಾಣುತ್ತಾರೆ. ಪತಿಯಲ್ಲಿ ದೇವನನ್ನು ಕಾಣದವರೂ ಮಾಂಗಲ್ಯವನ್ನು ಸಾಕ್ಷಾತ್ ಪತಿದೇವನೆಂದೇ ನಂಬಿ ಆದರಲ್ಲಿ ಸರ್ವಸ್ವವನ್ನು ಕಾಣುತ್ತಾರೆ. ಯಾವ ಆಭರಣವನ್ನು ಕಳಚಿಟ್ಟರೂ ಮಾಂಗಲ್ಯವೊಂದನ್ನು ಪೆಟ್ಟಿಗೆಗೆ ಸೇರಿಸುವುದಿಲ್ಲ.

ಮಾಂಗಲ್ಯದ ನಿರ್ಮಾಣ ಹಲವು ಬಗೆ. ಆವೆಲ್ಲದರಲ್ಲೂ ಸಮಾನವಾದದ್ದು ಬಟ್ಟಲಾಕಾರದ ಗುಂಡಗಿನ ತಾಳಿ. ಇದು ಬಂಗಾರದಿಂದ ನಿರ್ಮಿತ. ಇದರೊಂದಿಗೆ ಬಂಗಾರದ ಗುಂಡುಗಳು ಕರಿಮಣಿಗಳು ಇತ್ಯಾದಿ.

ತಾಳಿಯ ಲಕ್ಷಣವನ್ನು ಸಮುಚ್ಚಯ ಹೀಗೆ ಹೇಳಿದೆ –

ಬ್ರಹ್ಮವಿಷ್ಣ್ವೀಶರೂಪಂ ತು ರಂಧ್ರವಚ್ಚ ತ್ರಿತಂತುಕಮ್ ।
ತ್ರಿರತ್ನಂ ರುಗ್ಮಜಂ ಸ್ತ್ರೀಣಾಂ ಮಾಂಗಲ್ಯಾಭರಣಂ ವಿದುಃ ॥

ಬ್ರಹ್ಮಾ ವಿಷ್ಣು ಮಹೇಶ್ವರ ಸ್ವರೂಪವಾದ ಮೂರು ರತ್ನ ಹಾಗೂ ಮೂರು ಎಳೆಯಿಂದ ಕೂಡಿರುವ ದುಂಡಗಿನ ಉಬ್ಬಿದ ಬಂಗಾರದ ಆಭರಣಕ್ಕೆ **ಮಾಂಗಲ್ಯಾಭರಣ** ವೆನ್ನುತ್ತಾರೆ. ಈ ಆಭರಣಕ್ಕೆ ಸಾವಧಾನತೆ ಎಂಬರ್ಥದ 'ತಾಳಿ' ಎಂಬ ಕನ್ನಡಶಬ್ದ ಹೇಗೆ ಬಂತೆಂದು ತಿಳಿಯದು.

ಬಂಗಾರಕ್ಕೆ ಪ್ರತಿನಿಧಿ ಅರಶಿನಕೊಂಬು. ಬಂಗಾರದ ಸಂಪಾದನೆಯೂ ಕಷ್ಟವೆಂಬ ಆರ್ಥಿಕಸ್ಥಿತಿಯಲ್ಲಿ ಅರಶಿನದ ಬೇರನ್ನು ತಂತುವಿನಿಂದ ಕಟ್ಟಿದಾಗ ಮಾಂಗಲ್ಯ ಸಿದ್ಧವಾಗುತ್ತದೆ.

ವಿಪ್ರರು ಮಾಂಗಲ್ಯಸೂತ್ರವನ್ನು ಸುಂದರವಾದ ವೈದಿಕ ಆಶೀರ್ಮಂತ್ರಗಳಿಂದ ಅಭಿಮಂತ್ರಿಸಿ ಮುತ್ತೈದೆಯರ ಕೈಯ್ಯಲ್ಲಿಡುತ್ತಾರೆ. ಅವರು ಆ ತಾಳಿಯನ್ನು ವೃದ್ಧ ಮುತ್ತೈದೆಯರ ಮಾಂಗಲ್ಯಕ್ಕೆ ಸ್ಪರ್ಶಮಾಡಿಸಿ ಈ ಮಾಂಗಲ್ಯದ ಶಕ್ತಿಯನ್ನು ವೃದ್ಧಿಗೊಳಿಸುತ್ತಾರೆ. ಮಂಗಲವಾದ್ಯಗಳ ನಿನಾದ ಮುಗಿಲು ಮುಟ್ಟುತ್ತಿದ್ದಂತೆ ಪತಿಯು ಪತ್ನಿಯ ಕಂಠದಲ್ಲಿ ಮಾಂಗಲ್ಯತಂತುವನ್ನು ಕಟ್ಟುತ್ತಾನೆ. ಮುತ್ತೈದೆಯರು ಸಹಕರಿಸುತ್ತಾರೆ.

**ಮಾಂಗಲ್ಯತಂತುನಾನೇನ ಭರ್ತೃಜೀವನಹೇತುನಾ ।**
**ಕಂಠೇ ಬಧ್ನಾಮಿ ಸುಭಗೇ ಸಾ (ತ್ವಂ) ಜೀವ ಶರದಃ ಶತಮ್ ॥**

'ಭರ್ತೃಜೀವನಹೇತುನಾ' ಎಂಬುದು ಪುರೋಹಿತರು ಹೇಳುವ ಸರಿಯಾದ ಪಾಠ. 'ಮಮ ಜೀವನಹೇತುನಾ' ಎಂಬುದು ಅವರು ಹೇಳಿಸುವ ಅಸಮರ್ಥಸಮಾಸದ ಪಾಠ. 'ಮಾಂಗಲ್ಯಂ ತಂತುನಾನೇನ' ಎಂಬ ಪಾಠವೂ ಇದೆ. ಆಗ ಹೀಗರ್ಥ – 'ನಾನು ದೀರ್ಘಕಾಲ ಬದುಕಬೇಕೆಂಬ ಹೇತುವಿನಿಂದ (ಜೀವನಹೇತುನಾ = ಜೀವನನಿಮಿತ್ತಂ) ಈ ಸೂತ್ರದಿಂದ ಸೌಮಂಗಲ್ಯಪ್ರತಿಬಂಧಕಗಳನ್ನು ನಿವಾರಿಸುವ (ಮಂ ವಿಘ್ನಂ ಗಿಲತಿ ನಾಶಯತೀತಿ ಮಂಗಲಂ, ತದೇವ ಮಾಂಗಲ್ಯಂ) ಮಾಂಗಲ್ಯಾಭರಣವನ್ನು ಓ ಸುಭಗಾಂಗಿ, ನಿನ್ನ ಕಂಠದಲ್ಲಿ ಕಟ್ಟುತ್ತೇನೆ. ನನ್ನೊಡನೆ ನೀನು ನೂರ್ಕಾಲ ಬಾಳು.'

ಸಭೆಯಲ್ಲಿ ಸೇರಿದ ಸರ್ವರೂ ವಧೂವರರ ಮೇಲೆ ಅಕ್ಷತೆಯ ಕಾಳು ಚೆಲ್ಲಿ 'ನೂರ್ಕಾಲ ಬಾಳಿ' ಎನ್ನುತ್ತಾರೆ. ಸೂರ್ಯಾವರ್ಗವನ್ನು ಹೇಳಿದ ವಿಪ್ರೋತ್ತಮರು ತಾನು ಹಿಡಿದಿದ್ದ ಮಂತ್ರಾಕ್ಷತೆಯನ್ನು ವಧೂವರರ ಶಿರಸ್ಸಿಗೆ ಹಾಕುತ್ತಾ 'ಅವಿಧವಾ ಭವ ವರ್ಷಾಣಿ ....' ಮುಂತಾದ ಆರು ಆಶೀರ್ಮಂತ್ರಗಳನ್ನು ಉಚ್ಚರಿಸುತ್ತಾರೆ. ಕುಲದೇವತಾ ಸ್ಥಾನದಿಂದ ಪ್ರಸಾದ ಬಂದಿದ್ದರೆ ಅದನ್ನೂ ನವದಂಪತಿಗಳಿಗೆ ನೀಡುತ್ತಾರೆ. ವಿವಾಹ-ಹೋಮದ ಉಳಿದ ಭಾಗವನ್ನು ಮುಗಿಸಿ ವಧೂವರರು ಏಳುತ್ತಾರೆ.

## ಗೃಹಪ್ರವೇಶನೀಯ ಇತ್ಯಾದಿ

ವಿವಾಹ ಹೋಮ ಮುಗಿದರೆ ವಿವಾಹದ ಮುಖ್ಯಪ್ರಕ್ರಿಯೆಗಳು ಮುಗಿದಿವೆ. ಆದರೂ ಇನ್ನೂ ಮೂರುದಿನದ ಪ್ರಕ್ರಿಯೆ ಇದೆ. ಮದುವೆಯೆಂಬುದು ಐದು ದಿನದ ಕೆಲಸ. ಇಂದು ಇವೆಲ್ಲ ಒಂದೇದಿನದಲ್ಲಿ ಮುಗಿಯುವುದಿದೆ.

ಮೊದಲದಿನ ದೇವರ ಸಮಾರಾಧನೆ, ಗ್ರಹಯಜ್ಞಗಳು. ಎರಡನೆ ದಿನ ಮದುವೆ, ಗೃಹಪ್ರವೇಶ, ಅಲ್ಲಿಂದ ಮೂರುದಿನ ವಿವಾಹವ್ರತದಿಂದ ಇದ್ದು ಮದುವೆಯ ನಾಲ್ಕನೆಯ ದಿನ ಅಭ್ಯಂಗಸ್ನಾನದೊಂದಿಗೆ ಹಸೆಮಣೆಯಲ್ಲಿ ಆರತಿ. ಹಾಗೂ ವಿವಾಹಾಂತ್ಯ ಪುಣ್ಯಾಹ.

ಇಲ್ಲಿರುವ ವಿಧಿವಿಧಾನಗಳನ್ನು ಹೇಳುವುದು ಬಲು ಕಷ್ಟ. ಅದರಲ್ಲೂ ಹತ್ತು ಹಲವು ಸಂಪ್ರದಾಯಗಳಿವೆ. ವಸಂತಪೂಜೆ, ಐರಿಣೀ ದಾನ, ನಾಕಬಲಿ (ನಾಗವಲ್ಲಿ) ಸ್ತಂಭಬಲಿಗಳನ್ನು ಕೆಲವರು ನಡೆಸುತ್ತಾರೆ. ಒಗಟು ನುಡಿಗಳ ಜೊತೆಗೆ ನವವಧುವಿನ ಲಜ್ಜೆ, ಸಂಕೋಚಗಳನ್ನು ಕಡಿಮೆ ಮಾಡಿ ಹೊಸಪರಿಸರಕ್ಕೆ ಹೊಂದಿಸುವ ಕೆಲಸವೂ ನಡೆಯುತ್ತದೆ. ಹೆಣ್ಣಿನ ಬೀಳ್ಕೊಡಿಗೆಯಿದೆ. ಇಲ್ಲಿ ಶಾಸ್ತ್ರಮರ್ಯಾದೆಗಿಂತಲೂ ಮುಖ್ಯವಾದುದು ಸಂಪ್ರದಾಯ. ಪುರೋಹಿತರ ಕಟ್ಟುಪಾಡು ಮಂತ್ರಗಳಿಗಿಂತಲೂ ಪ್ರಧಾನವಾದುದು ಸಂಪ್ರದಾಯಾಭಿಜ್ಞ ಹಿರಿಯ ಪುರಂಧ್ರಿಯರ ಪದ್ಧತಿ - ಸುವ್ವಾಲಿಗಳು.

ಇಷ್ಟು ವಾಸ್ತವವಿಷಯ. ಹಾಗಿದ್ದರೂ ಬಿಟ್ಟುಬಿಡಬಾರದ ಶಾಸ್ತ್ರೀಯವಾದ ಕೆಲವು ಅನುಷ್ಠಾನಗಳನ್ನು ಗಮನಿಸೋಣ.

## ಗೃಹಪ್ರವೇಶನೀಯ ಹೋಮ

ವಿವಾಹದಿನದಂದೇ ಸಾಯಂಕಾಲ (ವಿವಾಹ ರಾತ್ರಿಯಾದರೆ ಮರುದಿನ) ವರ ವಧುವಿನೊಂದಿಗೆ ಸ್ವಗೃಹಕ್ಕೆ ಬಂದಿದ್ದಾನೆ. ಅಲ್ಲಿ ನಡೆಸುವ ಹೋಮ **ಗೃಹಪ್ರವೇಶನೀಯ ಹೋಮ**. ಇಂದಿನ ಅನಿವಾರ್ಯತೆಗಳಿಗೆ ಒಗ್ಗಿಕೊಂಡು ಮದುವೆ ನಡೆದ ಸ್ಥಳದಲ್ಲಿಯೇ ಈ ಹೋಮವೂ ನಡೆದು ಬಿಡುತ್ತದೆ. **'ಅಕರಣಾತ್ ಮಂದಕರಣಂ ಶ್ರೇಯಃ'** ಅಷ್ಟೇ.

ವರ ಸಾಯಂಸಂಧ್ಯೆಯನ್ನು ಮುಗಿಸುತ್ತಾನೆ. ಸಾಯಂಕಾಲದ ಔಪಾಸನವನ್ನು ಇಂದು ಆರಂಭಿಸುತ್ತಾನೆ. ವಿವಾಹಹೋಮದ ಅಗ್ನಿಯನ್ನು ಹೃದಯದಲ್ಲಿ ಸಮಾ-ರೋಪಿಸಿಕೊಂಡಿದ್ದು ಅದನ್ನು ಇಲ್ಲಿ ಅಗ್ನಿಯಲ್ಲಿ ಆವಾಹಿಸುತ್ತಾನೆ. ಇದಕ್ಕೆ **ಅಗ್ನಿಪ್ರತ್ಯವರೋಹಣ** ಎಂದು ಹೆಸರು. ಈ ಅಗ್ನಿಯನ್ನು ಅರ್ಚಿಸಿ ಧ್ಯಾನಿಸಿ ಅಗ್ನಿ ಹಾಗೂ

ಪ್ರಜಾಪತಿಗೆ ಪತ್ನಿಯೊಂದಿಗೆ ಆಹುತಿಯನ್ನು ನೀಡುತ್ತಾನೆ. ಅಗ್ನಿಪ್ರಜಾಪತಿಯರನ್ನು ಉಪಸ್ಥಾನ ಮಾಡಿದಾಗ ಸಾಯಮೌಪಾಸನ ಮುಗಿದಿದೆ. ಸೂರ್ಯ-ಪ್ರಜಾಪತಿಯರಿಗೂ ಆಹುತಿಯಿತ್ತರೆ ಅದು ಪ್ರಾತರೌಪಾಸನ. ಸಾಮಾನ್ಯವಾಗಿ ಔಪಾಸನೆ ಮಾಡುವವ ಇಂದು ಸಾಯಂ ಮತ್ತು ನಾಳೆ ಪ್ರಾತಃ ಈ ಎರಡೂ ಔಪಾಸನಗಳನ್ನು ಜೊತೆಗೇ ಮಾಡುತ್ತಾನೆ.

ಔಪಾಸನೆ ಮುಗಿಸಿದ ಮೇಲೆ ಅದೇ ಅಗ್ನಿಯಲ್ಲಿ ಗೃಹಪ್ರವೇಶನೀಯ ಹೋಮದ ಅಂಗವಾದ ನಾಲ್ಕು ಆಹುತಿಗಳನ್ನು ಸೂರ್ಯಾಸಾವಿತ್ರೀ ಎಂಬ ದೇವಿಗೆ ನೀಡುತ್ತಾನೆ. ಪತ್ನಿ ಸಹಕರಿಸುತ್ತಾಳೆ. ದಧಿಪ್ರಾಶನದೊಂದಿಗೆ ಯಜ್ಞಹುತಭಸ್ಮದಿಂದ ಪತ್ನೀ ಹೃದಯ-ದೇಶದಲ್ಲಿ ಸ್ಪರ್ಶಿಸುವ ಹೃದಯಾಂಜನಪ್ರಕ್ರಿಯೆ ನಡೆಯುತ್ತದೆ.

## ಹಸೆಮಣೆ ಮದುವೆ

ಈ ಸಮಯದ ಒಂದು ಆಚಾರವಿಶೇಷ **ಚಾಪೆಮದುವೆ**. ಹಸೆಯೆಂದರೆ ಚಾಪೆ. ಮಂಗಳಾಸನ. ತುಳುವರಲ್ಲಿ ಇದು '**ಪಜೆ ಮದಿಮೆ**' ಎಂಬ ಹೆಸರಿನಿಂದ ಚಾಲ್ತಿಯಲ್ಲಿದೆ. ವಧೂವರರು ನಿಂತಿರುವಂತೆ ನಾಲ್ವರು ಮುತ್ತೈದೆಯರು ಹೊಸಚಾಪೆಯೊಂದನ್ನು ಹರಡುತ್ತಾರೆ. ವರ ತನ್ನ ಉಂಗುರವನ್ನು ಆ ಚಾಪೆಯಲ್ಲಿ ಅಕ್ಷತೆಯೊಂದಿಗೆ ಚೆಲ್ಲುತ್ತಾನೆ. ಪ್ರಗಲ್ಭನಾರಿಯರು ನಾ ಮುಂದು ತಾ ಮುಂದೆಂಬ ಸ್ಪರ್ಧೆಯಿಂದ ಉಂಗುರಕ್ಕೆ ಕೈಹಾಕಿ ಹುಡುಕುತ್ತಾರೆ. ಚತುರೆಯೋರ್ವಳು ಹೆಕ್ಕಿ ಕೊಡುತ್ತಾಳೆ. ಗೆಲುವಿನ ನೋಟ ಬೀರುತ್ತಾಳೆ. ಆ ಮೇಲೆ ಅದೇ ಹಸೆಯಲ್ಲಿ ಕುಳಿತು ಗೃಹಪ್ರವೇಶನೀಯ ಹೋಮ ನಡೆಯುತ್ತದೆ. ಈ ಹಸೆಯಲ್ಲಿರುವಾಗ ವರನ ತಾಯಿ ಒಂದು ಸೀರೆಯನ್ನು ನವ ಸೊಸೆಗೆ ಉಡುಗೊರೆಯಾಗಿ ನೀಡುತ್ತಾಳೆ. ಇದಕ್ಕೆ 'ಹಸೆಮದುವೆ ಸೀರೆ' ಎನ್ನಲಾಗುತ್ತದೆ. ಈ ಹಸೆಯಲ್ಲಿ ಹೊಸಸೀರೆಯುಟ್ಟ ವಧುವಿನೊಂದಿಗೆ ವರನಿಗೆ ಸುವಾಸಿನಿಯರಿಂದ ನೀರಾಜನ ಆರತಿ ನಡೆಯುತ್ತದೆ. ಇದೇ ಸಮಯದಲ್ಲಿ ವಿವಾಹಚತುರ್ಥದಿನಕೃತ್ಯವೂ ನಡೆದುಬಿಡುತ್ತದೆ.

## ಧ್ರುವಾರುಂಧತೀದರ್ಶನ

ವಿವಾಹದಂದು ರಾತ್ರಿ ವರನು ವಧುವಿಗೆ ಧ್ರುವ, ಸಪ್ತರ್ಷಿಗಳು ಹಾಗೂ ಅರುಂಧತೀ ನಕ್ಷತ್ರಗಳನ್ನು ಆಕಾಶದಲ್ಲಿ ತೋರಿಸುತ್ತಾನೆ.

ತಾನು ಧ್ರುವನಂತೆ ದೀರ್ಘಾಯುಷ್ಮಂತನೂ, ಸಪ್ತರ್ಷಿಗಳಂತೆ ಸದಾಚಾರ ಸಮನುಷ್ಠಾನನಿಷ್ಠನೂ ಆಗುವಂತೆ, ಈಕೆ ಅರುಂಧತಿಯಂತೆ ಪತಿಪರಾಯಣೆಯೂ, ಗೃಹನಿರ್ವಹಣದಕ್ಷೆಯೂ ಆಗಿರುವಂತೆ ಪ್ರಾರ್ಥಿಸುತ್ತಾನೆ.

ದಿಗಂತದ ಉತ್ತರದಲ್ಲಿ ಹೊಳೆಯುವ ದೊಡ್ಡ ಚುಕ್ಕಿ ಧ್ರುವ. ಅದರ ದಕ್ಷಿಣಕ್ಕೆ ತೋರುವ ಏಳು ನಕ್ಷತ್ರಗಳ ವ್ಯೂಹ ಸಪ್ತರ್ಷಿಮಂಡಲ. ಅದರಲ್ಲಿ ಕ್ರಮವಾಗಿ ಕಶ್ಯಪ, ಅತ್ರಿ , ಭರದ್ವಾಜ, ವಿಶ್ವಾಮಿತ್ರ , ಗೌತಮ, ಜಮದಗ್ನಿ, ವಸಿಷ್ಠ ನಕ್ಷತ್ರಗಳು. ವಸಿಷ್ಠ ನಕ್ಷತ್ರದ ಸನಿಹದಲ್ಲಿ ಕಂಡಿತೋ ಇಲ್ಲವೋ? ಎಂಬಂತೆ ಮಿನುಗಿ ಮಾಸುವ ಅಲ್ಪತಾರೆ ಅರುಂಧತೀ. ವಸಿಷ್ಠನನ್ನು ತೋರಿಸದೇ ಅರುಂಧತಿಯನ್ನು ತೋರಿಸುವುದು ಶಕ್ಯವಿಲ್ಲ. ಒಂದೊಂದೇ ಪರಿಚಿತ ನಕ್ಷತ್ರದಿಂದ ಪಕ್ಕದ ತಾರೆಗೆ ದೃಷ್ಟಿಹರಿಯುವಂತೆ ತೋರಿಸಿ ವಸಿಷ್ಠನಲ್ಲಿ ಬಂದು, ಅಲ್ಲಿ ದೃಷ್ಟಿ ನೆಟ್ಟ ಮೇಲೆ ''ಅದರ ಪಕ್ಕಕ್ಕೆ ಎಡಕ್ಕೆ ನೋಡು. ಬರೀ ನಾಲ್ಕಂಗುಲದೂರದಲ್ಲಿ ಒಂದು ಮಿನುಗು ತಾರೆ. ಅದೇ ಅರುಂಧತಿ'' ಎನ್ನಬೇಕು. ಕಾಣದೇ ಹೋದರೂ ಕಂಡಿತು ಎನ್ನುವ ಸಂಕೋಚದ ಹುಡುಗಿಯರಿದ್ದಾರೆ. ಕಂಡಿದೆಯೆಂದು ಪ್ರಶ್ನಿಸಿ ನಿರ್ಧರಿಸುವ ಚಾಣಾಕ್ಷ ವರ.

ವಿವಾಹದಿಂದ ಆರಂಭಿಸಿ ಅರುಂಧತಿಯನ್ನು ತೋರಿಸುವ ತನಕ ವಧೂವಿಗೆ ಮೌನವಿದೆ. ದಂಪತಿಗಳಿಗೇ ಮೌನವ್ರತವನ್ನು ಸ್ಮೃತಿರತ್ನ ವಿಧಿಸಿದೆ. **'ದಂಪತೀ ನ ವ್ಯಾಹರೇತಾಂ ಯಾವತ್ ಧ್ರುವನಿರೀಕ್ಷಣಮ್'** ಎಂದು. ಧ್ರುವ, ಸಪ್ತರ್ಷಿ, ಅರುಂಧತಿಯರನ್ನು ಕಂಡ ಮೇಲೆ ಮಾತಿನ ಸೃಷ್ಟಿಯಲ್ಲಿ ತೊಡಗುವವರಿಗೆ ಜೀವನ ಪೂರ್ತಿ ಪ್ರೀತಿಯ ಮಾತುಗಳ ಮಹಾಪೂರವನ್ನು ವಾಗ್ಯಮಿಗಳಾದ ಋಷಿಗಳು ನೀಡುತ್ತಾರೆ. **'ತಾನ್ ದೃಷ್ಟ್ವಾ ವಿಸೃಜತೋರ್ವಾಚಂ ತಯೋರಾಶಿಷ ಉತ್ತಮಾಃ'**

ಕೆಲವೊಂದು ಸಂಪ್ರದಾಯದಲ್ಲಿ ಧ್ರುವ ಅರುಂಧತಿಯರನ್ನು ನೋಡಿ ತೆಂಗಿನ ಕಾಯಿ ಒಡೆದು ಆರಾಧಿಸುತ್ತಾರೆ.

ಒಟ್ಟಿನಲ್ಲಿ ವರನಿಗೆ ಖಗೋಲಜ್ಞಾನವೂ ಸ್ವಲ್ಪಮಟ್ಟಿಗೆ ಬೇಕು. ಉಪನಯನದ ದಿನ ಪುರೋಹಿತರೇ ಅಪ್ಪನಿಗೆ ಗಾಯತ್ರಿಯನ್ನು ಉಪದೇಶಿಸಬೇಕಾಗುವ ದುರ್ಭರ ಪ್ರಸಂಗದಂತೆ ಪುರೋಹಿತರೇ ಅರುಂಧತಿಯನ್ನು ವಧುವಿಗೆ ತೋರಿಸುವ ಅನಿ-ವಾರ್ಯತೆಯ ದೀನಸ್ಥಿತಿ ವರನಿಗೆ ಬರಕೂಡದು. ಕನಿಷ್ಠ ಪ್ರಾತಃಕಾಲದಲ್ಲಿ ಕಾಣಿಸುವ ಗುರು ಶುಕ್ರರ ಬಗ್ಗೆ, ಸಪ್ತರ್ಷಿಮಂಡಲ, ಧ್ರುವಮಂಡಲಗಳ ಬಗೆಗಿನ ಪರಿಚಯವಾದರೂ ಬೇಕು. ಈಗಿನ ಕೆಲ ಹುಡುಗರಿಗೆ ಚಂದ್ರಮಂಡಲವೂ ಗೊತ್ತಿರುವುದಿಲ್ಲ!! ಅದನ್ನು ಟೆಲಿವಿಝನ್‌ನಲ್ಲಿ ಕಂಡಿದ್ದೇನೆ ಎನ್ನುತ್ತಾರೆ. ಪ್ರಕೃತಿಯ ಸೊಬಗಿನ ಆಸ್ವಾದನೆಯೇ ತಪ್ಪಿಹೋಗಿದೆ.

# ನಾಲ್ಕನೆಯ ದಿನದ ವಿಧಿ

ಗೃಹಪ್ರವೇಶನೀಯ ಹೋಮವಾದೊಡನೆ ಧ್ರುವಾರುಂಧತೀದರ್ಶನಮಾಡಿ '**ಅಥ ತ್ರಿರಾತ್ರಂ ವ್ರತಂ ಕರಿಷ್ಯಾವಹೇ**' ಎಂದು ದಂಪತಿಗಳು ಸಂಕಲ್ಪಿಸಿ ಮೂರುರಾತ್ರಿ ಪರಸ್ಪರರಲ್ಲಿ ಮೌನದಿಂದ ಹಾಗೂ ಬ್ರಹ್ಮಚರ್ಯದಿಂದ ಜೊತೆಗಿದ್ದು ದೇವತಾಪೂಜೆ-ಯನ್ನು ಮಾಡುತ್ತಾರೆ.

ದಂಪತಿಗಳಲ್ಲಿ ಮೊದಲ ದಿನ ರೋಹಿಣೀ ಚಂದ್ರರ ಸನ್ನಿಧಾನ. ಈ ದಿನ ಇವರು ದಾಕ್ಷಾಯಿಣೀ ದೇವಿಯನ್ನು ಪೂಜಿಸುತ್ತಾರೆ. ಎರಡನೇ ದಿನ ಇವರಲ್ಲಿ ಅಪ್ಸರೋ-ಗಂಧರ್ವರ ಸನ್ನಿಧಾನ. ಈ ದಿನ ಗೌರಿಯ ಮಹಾದೇವಿರೂಪವನ್ನು ಆರಾಧಿಸುತ್ತಾರೆ. ಮೂರನೆಯ ದಿನ ಸ್ವಾಹಾ- ಅಗ್ನಿಯರ ಸನ್ನಿಧಾನ. ಇಂದು ಗೌರಿಯ ಕಾಳಿಕಾರೂಪವನ್ನು ಆರಾಧಿಸುತ್ತಾರೆ. ನಾಲ್ಕನೆಯ ದಿನ ಇವರು ಮಾನವ ಸತಿ-ಪತಿಯರಾಗಿದ್ದಾರೆ. ಇಂದು ಇವರು ಶಂಕರೀಪಾರ್ವತಿಯನ್ನು ಹರನೊಂದಿಗೆ ಪೂಜಿಸಿ ವರ ಪಡೆಯುತ್ತಾರೆ.

ಸೂರ್ಯಾವರ್ಗದಲ್ಲಿ ಬರುವ ಒಂದು ಮಂತ್ರ ಈ ವಿಷಯವನ್ನು ತಿಳಿಸಿದೆ.

**ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ ।**
**ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥**

ಈಕೆಯನ್ನು ಸೋಮ ಗಂಧರ್ವನಿಗಿತ್ತ. ಗಂಧರ್ವ ಅಗ್ನಿಗಿತ್ತ. ಅಗ್ನಿದೇವ ನಂತರದಲ್ಲಿ ಪುತ್ರಾದಿಸಂಪತ್ತಿನ ಖನಿಯಾದ ಈಕೆಯನ್ನು ನನಗಿತ್ತ.

ಇದಕ್ಕೆ ತ್ರಿರಾತ್ರವ್ರತ ಅಥವಾ ವಿವಾಹವ್ರತ ಎಂದು ಹೆಸರು. ವ್ರತದಲ್ಲಿ ಉಪ್ಪು ಖಾರವಿಲ್ಲದ ಭೋಜನದ ನಿಯಮವಿದೆ. ಇಂದಿನ ದಿನಗಳಲ್ಲಿ ಇವರು ಮೂರು ಗಂಟೆಗಳ ಕಾಲ ಮೌನವಿದ್ದರೆ ಅದೇ ಒಂದು ಪರಮಾದ್ಭುತ. ಪಕ್ಷವೇ ಮಾಸವೆಂದು ಬಗೆದು ಪರಮಹಂಸರು ಚಾತುರ್ಮಾಸ್ಯ ಕೂಡುವಂತೆ ಘಂಟೆಯೇ ದಿನವೆಂದು ಬಗೆದು ಮೂರುಘಂಟೆಯಾದರೂ ಮೌನಾಚರಣೆ ಮಾಡಿಸುವ ನಿಷ್ಠಪುರೋಹಿತರೂ ಇದ್ದಾರೆ. ಆದರೆ ಇವರನ್ನು ಮದುವೆ ಮಾಡಿಸಲು ಕರೆಯುವವರು ಕಡಿಮೆ!

ತ್ರಿರಾತ್ರವ್ರತ ಮುಗಿದಂದು ಪ್ರಾತಃ ವಧೂ ತಾನು ವಿವಾಹದಂದು ಧರಿಸಿದ್ದ ಉತ್ತರೀಯ (ವಾಧೂಯ) ವಸ್ತ್ರವನ್ನು ವ್ರತಪೂರ್ತಿಗಾಗಿ ಸೂರ್ಯಾವರ್ಗವನ್ನು ಬಲ್ಲ ವಿಪ್ರನಿಗಿತ್ತು ನಮಸ್ಕರಿಸುತ್ತಾಳೆ. ಆತನು ಕೆಲವೊಮ್ಮೆ ಈಕೆಗೇ ಉಡುಗೊರೆಯಾಗಿ ನೀಡುತ್ತಾನೆ. ಅದನ್ನು ಪಡೆಯುವ ಅರ್ಹತೆ ಅವನದ್ದು. '**ಸೂರ್ಯಾಂ ಯೋ ಬ್ರಹ್ಮಾ**

ವಿದ್ವಾತ್ ಸ ಇತ್ ವಾಧೂಯಮರ್ಹತಿ'. ವಾಧೂಯವೆಂದರೆ ಧಾರೆಸೀರೆಯೆಂದೂ ಅರ್ಥ.

ಈ ವಧೂವರರು ಹಿಂದಿನ ಅದೇ ಚಾಪೆಯಲ್ಲಿ ಕುಳಿತು ಪ್ರಾತರೌಪಾಸನವನ್ನು ಮುಗಿಸಿ ಗಣಪತಿ ಪೂಜೆ ಮಾಡುತ್ತಾರೆ. ಹಿಂದಿನಂತೆ ಉಂಗುರ ಚೆಲ್ಲುವ, ಹುಡುಕುವ, ಹೆಕ್ಕುವ ಆಟ ನಡೆಯುತ್ತದೆ. ಸುವಾಸಿನಿಯರು ಚಾಪೆ ಮಡಿಚಿಡುತ್ತಾರೆ. ಆ ಸುವಾಸಿನಿಯರಿಗೆ ಫಲತಾಂಬೂಲಾದಿ ಸನ್ಮಾನ ನಡೆಯುತ್ತದೆ. ವಧೂವರರು ಕ್ಷೀರಾಜ್ಯಪಾನ ಮಾಡಿ ಹೊರ ಅಂಗಣಕ್ಕೆ ಬಂದು ಮಂಗಲ ತೈಲಾಭ್ಯಂಗ ಮಾಡಿಕೊಳ್ಳುತ್ತಾರೆ. ವರನ ಪಾದ ತೊಳೆದು ವಧು ಶಿರದಲ್ಲಿ ಪಾದೋದಕ ಧರಿಸಿದ್ದಾಳೆ. ವಧೂವರರು ಮಂಗಲತೈಲ ಧರಿಸಿ ಉಳಿದವರೊಂದಿಗೆ ಸ್ನಾನಕ್ಕಾಗಿ ನದೀ ಇಲ್ಲವೇ ಕೆರೆಗೆ ಸಾಗುತ್ತಾರೆ. ವರನ ಕೈಯ್ಯಲ್ಲಿ ಬಿದಿರಕೋಲಿದೆ. ಇಲ್ಲಿ ಸ್ನಾನಸಂಕಲ್ಪದೊಂದಿಗೆ ನದಿಗಿಳಿಯುತ್ತಾ ಜೊತೆ ಸೇರಿ ಉತ್ತರೀಯವಸ್ತ್ರದಿಂದ ಮೀನು ಹಿಡಿಯುವ ಆಟವಾಡುತ್ತಾರೆ. **'ಉತ್ತರೀಯ ವಸ್ತ್ರಾಂಚಲೇನ ಝಷಮಾಹರೇತಾಮ್'** ಎಂದು ಪ್ರಯೋಗವಾಕ್ಯ. ಮೀನು ಹಿಡಿದು ಹಿಂಸಿಸಬೇಕೆಂದು ಅರ್ಥವಲ್ಲ. ಇದೊಂದು ಥರದ ನೀರಾಟ. ಸ್ನಾನ ಮುಗಿಸುತ್ತಾರೆ.

ಇಂದಿನ ಕಲ್ಯಾಣಮಂಟಪದ ಮದುವೆಗಳಲ್ಲಿ ತಟ್ಟೆ ಹಾಗೂ ದೊನ್ನೆಗಳಲ್ಲಿ ಈ ಎಲ್ಲ ನೀರಾಟವೂ ನಡೆದು ಬಿಡುತ್ತದೆ.

ವರ ವೇಣುದಂಡವನ್ನು ಅಲ್ಲಿಯೇ ಬಿಟ್ಟು ಬಿಡುತ್ತಾನೆ. ಇಬ್ಬರೂ ಶುದ್ಧವಸ್ತ್ರವುಟ್ಟು ನದೀಪುಲಿನದಲ್ಲಿ ಸ್ವಸ್ತಿಕೆಯಿಟ್ಟು ಸವಿತೃದೇವನನ್ನು ಪೂಜಿಸುತ್ತಾರೆ. ಸವಿತೃದೇವನನ್ನು ಕೈಮುಗಿದು ಪ್ರಾರ್ಥಿಸುತ್ತಾರೆ. **'ಶರ್ಮಾಸಿ ಶರ್ಮಾವಾಭ್ಯಾಂ ಯಚ್ಛ'** – ನೀನು ಸುಖರೂಪಿ; ನಮ್ಮೀರ್ವರಿಗೂ ಸುಖಸಂತೋಷ ನೀಡು.

ಅಲ್ಲಿಂದ ಊರದೇವಾಲಯಕ್ಕೆ ಹೋಗಿ ಮನೆಗೆ ಬರುತ್ತಾ ದ್ವಾರಲಕ್ಷ್ಮಿಯನ್ನು ಪತ್ನಿ ಪೂಜಿಸುತ್ತಾಳೆ. ಧಾನ್ಯ ಚೆಲ್ಲಿ ಧಾನ್ಯಲಕ್ಷ್ಮಿಯಂತೆ ಮನೆಗೆ ಅಡಿಯಿಡುತ್ತಾಳೆ.

ವಿವಾಹಾಂತದಲ್ಲಿ ಮತ್ತೊಂದು ಪುಣ್ಯಾಹವಾಚನ. ವಿಪ್ರರು ಮಂತ್ರಾಕ್ಷತೆಯೊಂದಿಗೆ ಆಶೀರ್ವದಿಸುತ್ತಾರೆ. ವಿಜೃಂಭಣೆಯ ವಿಪ್ರಭೋಜನಪೂರ್ವಕ ಅನ್ನಸಂತರ್ಪಣೆ ವಿವಾಹದ ಕೊನೆಯ ಅಂಗ. **'ವಿಪ್ರಭೋಜನಮಾತ್ರೇಣ ವ್ಯಂಗಂ ಸಾಂಗಂ ಭವೇದ್ ಧ್ರುವಮ್'**– ಊನಾಂಗವೆಲ್ಲವೂ ಸಕಲಾಂಗವಾಗುವುದು ವಿಪ್ರಭೋಜನದಿಂದ.

-----

# ಕೊನೆಗೆರಡು ಮಾತು

ಅವಸರದಲ್ಲಿ ಮದುವೆ ಮಾಡಿಕೊಳ್ಳುವುದು ಅಪಾಯ. ಅವಸರದಲ್ಲಿ ಮದುವೆ ಮಾಡುವುದೂ ಅಪರಾಧ. ಅವಸರವಸರದಿಂದ ಮದುವೆ ಮಾಡಿಸುವುದೂ ತಪ್ಪು. ಅವಸರದಿಂದ ಮದುವೆಯ ಬಗೆಗೆ ಬರೆಯುವುದು ತಪ್ಪು ಅಲ್ಲ ಅಂತ ಹೇಗೆ ಹೇಳುವುದು? ಪ್ರೀತಿಯಿಂದ ಕಳಕಳಿಯಿಂದ ಮಾಡಿದ ತಪ್ಪನ್ನೂ ಒಪ್ಪು ಮಾಡಿಕೊಂಡು ಉದ್ಧರಿಸುವುದು ಕರುಣೆಯ ಕಡಲು ಹೆದ್ದೇವತೆಯ ಸ್ವಭಾವ.

ಮಕ್ಕಳಿಗೆ ಮದುವೆ ಮಾಡಲಿರುವ ಹೆತ್ತವರಿಗಾಗಿ ಈ ಪುಸ್ತಕ. ಮದುವೆಯಾಗಲಿರುವ ವಧೂವರರಿಗಾಗಿ ಈ ಹೊತ್ತಿಗೆ. ಇವರಿಗೆ ವಿವಾಹದ ಮಹತ್ವ-ವಿಧಿ-ವಿಧಾನಗಳ ಬಗೆಗೆ ತಿಳಿಹೇಳುವ ಅಗ್ರಮಾನ್ಯ ಜಿಜ್ಞಾಸುಗಳಿಗಾಗಿ ಈ ಪುಸ್ತಿಕೆ.

ಪುಂಸವನ, ಸೀಮಂತಾದಿಗಳಿಗೆ ಪುರೋಹಿತರನ್ನು ಸೇರಿಸಿಕೊಂಡು ಮೂರು ಜನ ಸಾಕು. ಉಪನಯನಕ್ಕೆ ವಟುವೂ ಸೇರಿ ನಾಲ್ವರು ಸಾಕು. ವಿವಾಹ ಹಾಗಲ್ಲ. ಹತ್ತು ಜನ ಸೇರಿ ನಡೆಯುವ ವಿಧಿಯಿದು. ಜನ ಹೆಚ್ಚು ಸೇರಿದಷ್ಟೂ ಸಂಪ್ರದಾಯ ಭೇದಗಳು ಹೆಚ್ಚುಹೆಚ್ಚು ನುಸುಳುತ್ತವೆ. ಎಷ್ಟೇ ಸಂಪ್ರದಾಯ ಭೇದಗಳಿದ್ದರೂ ಅವೆಲ್ಲದರಲ್ಲೂ ಅನುಸ್ಯೂತವಾದ, ಹಲವು ಹೂವುಗಳ ಮಾಲೆಯಲ್ಲಿ ನೂಲಿನಂದದಿ ಮೆರೆವ ನಿಯತ ಕ್ರಮವಿದೆ. ಕ್ರಾಂತದರ್ಶಿಯಾದ ಋಷಿಪರಂಪರೆ ಹಾಕಿಕೊಟ್ಟ ಚೌಕಟ್ಟನ್ನು ವಿವಾಹ-ವಿಧಿಯು ಮೀರುವುದಿಲ್ಲ. ಮೀರಬಾರದು.

ಪ್ರಾಚೀನರು ಹಾಕಿಕೊಟ್ಟ ವಿಧಿಗಳನ್ನು ಆಧುನಿಕನು ಮೀರುವುದು ಅದರ ಅಂತಃಸತ್ವದ ಅಜ್ಞಾನದಿಂದ. ಅರಿವು ಶ್ರದ್ಧೆಯ ಸೋಪಾನ. ಶ್ರದ್ಧೆಯನ್ನು ಹುಟ್ಟಿಸುವ ಅರಿವಿಗಾಗಿ ಈ ನನ್ನ ಅಲ್ಪಪ್ರಯತ್ನ.

ಶ್ರದ್ಧೆ ಮತ್ತೆ ಹೆಚ್ಚಿನ ಅರಿವಿಗೆ ಕಾರಣ. **ಶ್ರದ್ಧಾವಾನ್ ಲಭತೇ ಜ್ಞಾನಮ್.** ಅಂತಹ ಎತ್ತರದ ಜ್ಞಾನ ಇಲ್ಲಿಲ್ಲ. **ಅಜ್ಞಶ್ಚ ಅಶ್ರದ್ಧಧಾನಶ್ಚ ಸಂಶಯಾತ್ಮಾ** ವಿನಶ್ಯತಿ ಎಂಬ ಕೃಷ್ಣನ ಮಾತಿನಲ್ಲಿ ಅಜ್ಞಾನಿಗೆ ಅಶ್ರದ್ಧಾಲುವಿಗೆ ಹೇಳಿದ ವಿನಾಶವನ್ನು ತಡೆಯುವ ಪ್ರಯತ್ನವಷ್ಟೇ ಇಲ್ಲಿದೆ.

ವಿವಾಹದ ಬಗ್ಗೆ ಬರೆಯ ಹೊರಟರೆ ಮುಗಿಯುವುದಿಲ್ಲ. ಹೆಣ್ಣು ಒಪ್ಪಿಸಿಕೊಡುವ ಸಾಂಪ್ರದಾಯಿಕವಿಧಿಗೆ ಬಣ್ಣ ಕೊಟ್ಟು ದೊಡ್ಡ ಉಪನ್ಯಾಸವಾಗಿ ಬರೆಯಬಹುದು. ರಂಭಾವಿವಾಹ - ಕುಂಭವಿವಾಹಾದಿಗಳ ಬಗೆಗೂ ಲೇಖನಿ ಬೆಳೆಸಬಹುದು. ಆಗ್ನೇಯ

ಸ್ಥಾಲೀಪಾಕ ಗೃಹಸ್ಥಧರ್ಮ. ವಧೂಉಪದೇಶಾದಿಗಳ ಬಗ್ಗೆ ಪುರಾಣಗಳನ್ನು ಬಿಚ್ಚಿಡ-ಬಹುದು. ಬರೆಯಬಹುದಾದದ್ದು ಬಹಳ. ಬರೆಯಲೇ ಬೇಕಾದ್ದು ಸೀಮಿತ.

ದೊಡ್ಡಹೊತ್ತಿಗೆಯ ಬಗ್ಗೆ ಈಗಿನ ಮಂದಿಗೆ ಅಸಡ್ಡೆ. ಅದಕ್ಕೂ ಆಯಿತು. ಬರೆಯಲೇ ಬೇಕೆನಿಸಿದುದನ್ನು ನಿಮ್ಮ ಮುಂದಿಟ್ಟಿದ್ದೇನೆ.

- - - - - - - - -

ಶ್ರೀವಾದಿರಾಜಗುರ್ವಂತರ್ಗತಮಧ್ವೇಶಾರ್ಪಣಮಸ್ತು

# ಪರಿಶಿಷ್ಟ

ಅನುಕೂಲವಧುಪ್ರಾಪ್ತಿಗಾಗಿ ಕನ್ಯಾರ್ಥಿಯು ಹೇಳಿಕೊಳ್ಳಬೇಕಾದ ಮಂತ್ರ –

**ಪತ್ನೀಂ ಮನೋರಮಾಂ ದೇಹಿ**
**ಮನೋವೃತ್ತಾನುಸಾರಿಣೀಮ್ ।**
**ತಾರಿಣೀಂ ದುಃಖಸಂಸಾರ-**
**ಸಾಗರಸ್ಯ ಕುಲೋದ್ಭವಾಮ್ ॥**

* * * * *

ಅನುರೂಪವರಪ್ರಾಪ್ತಿಗಾಗಿ ವಧೂ ಹೇಳಿಕೊಳ್ಳುವ ಕಾತ್ಯಾಯಿನೀ ಸ್ತುತಿ –

**ಕಾತ್ಯಾಯಿನೀ ಮಹಾಮಾಯೇ**
**ಮಹಾಯೋಗಿನ್ಯಧೀಶ್ವರಿ ।**
**ನಂದಗೋಪಸುತಂ ದೇವಂ**
**ಪತಿಂ ಮೇ ಕುರು ತೇ ನಮಃ ॥**

* * * * *

ವಿವಾಹಪ್ರತಿಬಂಧದೋಷನಿವೃತ್ತಿ ಹಾಗೂ ಶೀಘ್ರಕಲ್ಯಾಣಯೋಗಸಿದ್ಧಿಗಾಗಿ ಕನ್ಯಾರ್ಥಿ ವರಾರ್ಥಿಗಳೀರ್ವರೂ ಪಠಿಸಬಹುದಾದ ಸ್ವಯಂವರಪಾರ್ವತೀ ಸ್ತುತಿ –

**ಬಾಲಾರ್ಕಾಯುತಸುಪ್ರಭಾಂ ಕರತಲೇ**
**ಲೋಲಂಬಮಾಲಾಕುಲಾಮ್**
**ಮಾಲಾಂ ಸಂದಧತೀಂ ಮನೋಹರತನುಂ**
**ಮಂದಸ್ಮಿತೋದ್ಯನ್ಮುಖೀಮ್ ।**
**ಮಂದಂ ಮಂದಮುಪೇಯುಷೀಂ ವರಯಿತುಂ**
**ಶಂಭುಂ ಜಗನ್ಮೋಹಿನೀಮ್**
**ವಂದೇ ತಾಂ ಸುಮುನೀಂದ್ರವಂದಿತಪದಾಮ್**
**ಇಷ್ಟಾರ್ಥದಾಂ ಪಾರ್ವತೀಮ್ ॥**

ಸಂಸಾರದಲ್ಲಿ ತಾಪತ್ರಯಗಳು ತಲೆದೋರಿದಾಗ ಕೃಷ್ಣನನ್ನು ಪ್ರಾರ್ಥಿಸುವ ತಾಪತ್ರಯೋನ್ಮೂಲನ ಮಂತ್ರ -

**ಕೃಷ್ಣ ಕೃಷ್ಣ ಮಹಾಭಾಗ**
**ಭಕ್ತಾನಾಮಭಯಂಕರ ।**
**ತ್ವಮೇಕೋ ದಹ್ಯಮಾನಾನಾಮ್**
**ಅಪವರ್ಗೋಽಸಿ ಸಂಸೃತೇಃ ॥**

* * * * *

ಭಯಪರಿಹಾರಕ್ಕಾಗಿ ದುರ್ಗೆಯನ್ನು ಸ್ತುತಿಸುವ ಭಯನಾಶನಮಂತ್ರ –

**ಸರ್ವಸ್ವರೂಪೇ ಸರ್ವೇಶೇ**
**ಸರ್ವಶಕ್ತಿಸಮನ್ವಿತೇ ।**
**ಭಯೇಭ್ಯಸ್ತ್ರಾಹಿ ನೋ ದೇವಿ**
**ದುರ್ಗೇ ದೇವಿ ನಮೋಽಸ್ತು ತೇ ॥**

* * * * *

ಸಂತಾನಪ್ರಾಪ್ತಿಗಾಗಿ ಪತಿ ಹೇಳಿಕೊಳ್ಳುವ ಸಂತಾನಗೋಪಾಲಕೃಷ್ಣಮಂತ್ರ –

**ಓಂ ಕ್ಲೀಂ ದೇವಕೀಸುತ ಗೋವಿಂದ**
**ವಾಸುದೇವ ಜಗತ್ಪತೇ ।**
**ದೇಹಿ ಮೇ ತನಯಂ ಕೃಷ್ಣ**
**ತ್ವಾಮಹಂ ಶರಣಂ ಗತಃ ॥**

* * * * *

ಶಿಶುಮೃತಿ, ಗರ್ಭಪಾತ ಇತ್ಯಾದಿ ತೊಂದರೆಯ ಪರಿಹಾರಕ್ಕಾಗಿ –

**ಶಂಖಚಕ್ರಧರಂ ದೇವಂ ಶ್ಯಾಮವರ್ಣಂ ಚತುರ್ಭುಜಮ್ ।**
**ಮಯೂರಪಿಚ್ಛಸಂಯುಕ್ತಂ ವಿಷ್ಣುತೇಜೋಪಬೃಂಹಿತಮ್ ॥**

ಸಮರ್ಪಯಂತಂ ವಿಪ್ರಾಯ ನಷ್ಟಾನಾನೀಯ ಬಾಲಕಾನ್ ।
ಕರುಣಾಮೃತಸಂಪೂರ್ಣಂ ಚೇಷ್ಟೈಕನಿಲಯಂ ತ್ವಜಮ್ ॥

ಸತ್ಸಂತಾನಪ್ರಾಪ್ತಿಗಾಗಿ ಕೃಷ್ಣಸ್ತುತಿ –

ಶ್ರೀಶಂ ಕಮಲಪತ್ರಾಕ್ಷಂ ದೇವಕೀನಂದನಂ ಹರಿಮ್ ।
ಸುತಸಂಪ್ರಾಪ್ತಯೇ ಕೃಷ್ಣಂ ನಮಾಮಿ ಮಧುಸೂದನಮ್ ॥೧॥

ನಮಾಮ್ಯಹಂ ವಾಸುದೇವಂ ಸುತಸಂಪ್ರಾಪ್ತಯೇ ಹರಿಮ್ ।
ಯಶೋದಾಂಕಗತಂ ಬಾಲಂ ಗೋಪಾಲಂ ನಂದನಂದನಮ್॥೨॥

ಪದ್ಮಾಪತೇ ಪದ್ಮನೇತ್ರ ಪದ್ಮನಾಭ ಜನಾರ್ದನ ।
ದೇಹಿ ಮೇ ತನಯಂ ಕೃಷ್ಣ ವಾಸುದೇವ ಜಗತ್ಪತೇ ॥೩॥

ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ ।
ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ(ತಾ) ॥೪॥

ಕಂಜಾಕ್ಷ ಕಮಲಾನಾಥ ಪರಕಾರುಣಿಕೋತ್ತಮ ।
ದೇಹಿ ಮೇ ತನಯಂ ಕೃಷ್ಣ ವಾಸುದೇವ ಜಗತ್ಪತೇ ॥೫॥

ಶ್ರೀಮಾನಿನೀಮಾನಚೋರ ಗೋಪೀವಸ್ತ್ರಾಪಹಾರಕ ।
ದೇಹಿ ಮೇ ತನಯಂ ಕೃಷ್ಣ ವಾಸುದೇವ ಜಗತ್ಪತೇ ॥೬॥

ವಾಸುದೇವ ಸುತಂ ದೇಹಿ ತನಯಂ ದೇಹಿ ಮಾಧವ ।
ಪುತ್ರಂ ಮೇ ದೇಹಿ ಶ್ರೀಕೃಷ್ಣ ವತ್ಸಂ ದೇಹಿ ಜಗತ್ಪ್ರಭೋ ॥೭॥

ವಂದೇ ಸಂತಾನಗೋಪಾಲಂ ಮಾಧವಂ ಭಕ್ತಕಾಮದಮ್ ।
ಅಸ್ಮಾಕಂ ಪುತ್ರಸಂಪ್ರಾಪ್ತ್ಯೈ ಸದಾ ಗೋವಿಂದಮಚ್ಯುತಮ್ ॥೮॥

ಸ್ತನ್ಯಂ ಪಿಬಂತಂ ಜನನೀಮುಖಾಂಬುಜಂ
ವಿಲೋಕ್ಯ ಮಂದಸ್ಮಿತಮುಜ್ಜ್ವಲಾಂಗಮ್ ।

ಸ್ಪೃಶಂತಮನ್ಯಸ್ತನಮಂಗುಲೀಭಿ-
ರ್ವಂದೇ ಯಶೋದಾಂಕಗತಂ ಮುಕುಂದಮ್ ॥೯॥

ವಂಶವಿಸ್ತಾರಕಂ ಪುತ್ರಂ ದೇಹಿ ಮೇ ಮಧುಸೂದನ ।
ಸುತಂ ದೇಹಿ ಸುತಂ ದೇಹಿ ತ್ವಾಮಹಂ ಶರಣಂ ಗತಃ(ತಾ) ॥೧೦॥

ನಮಸ್ತೇ ವಾಸುದೇವಾಯ ನಿತ್ಯಶ್ರೀಕಾಮುಕಾಯ ತೇ ।
ಪುತ್ರದಾಯ ಚ ಸರ್ಪೇಂದ್ರಶಾಯಿನೇ ರಂಗಶಾಯಿನೇ ॥೧೧॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

- - - - - -



ಋಷಿ ಮುನಿಗಳು ಸಂಸಾರವನ್ನು ರೋಗವೆಂದರು.
ಆದರೆ 'ಸಮ್-ಸಾರ' ಎಂದೇ ಕರೆದರು.
ಗಂಡು ಹೆಣ್ಣು ಜೊತೆ ಸೇರಿ ಸರಿ ನಡೆ ಇದ್ದರೆ, ಸಮ್-ಸಾರ.
ಸಂಸಾರ ಬಿಟ್ಟವರ ಇರವಿಗೂ ಸಂಸಾರಿಗಳೇ ಆಧಾರ.
ಸಂಸಾರಿಯೂ ಸಾರಾತ್ ಸಾರತರವೆನಿಪ ಪರತತ್ವವನ್ನು ಸೇರಬಲ್ಲ.
ಆ ಅರ್ಹತೆಗಾಗಿ 'ವಿವಾಹ' ಎಂಬ ವಿಧಿ.
ಸಂಸಾರವನ್ನು ರೋಗವೆಂದ ಋಷಿಗಳೇ ಕಂಡು ಕರುಣಿಸಿದ ವಿಧಿ.
ಈ ವಿಧಿಯೊಳಗಿನ ತವನಿಧಿಗಾಗಿ...... ದಯವಿಟ್ಟು ಓದಿ.